# ಕರ್ಮವೀರ

ಹುಬ್ಬಳ್ಳಿ ತಾ. ೨೫ – ೧೦ – ೪೮

ಸಂಪುಟ ೨೦ ] [ ಸಂಚಿಕೆ ೨೭

ಜನಪ್ರಿಯ ಸಚಿತ್ರ ವಾರಪತ್ರಿಕೆ

ಸಂಪಾದಕರು:
ಹ. ರಾ. ಪುರೋಹಿತ ]

[ ಸಂಸ್ಥಾಪಕರು— ನಿರ್ದೇಶಕರು:
ರಂ. ರಾ. ದಿವಾಕರ

## ಇತ್ತೆಹಾದದ ಸಾಮ್ರಾಜ್ಯ ಯೋಜನೆ

ತನ್ನ ಕೆಲಸವನ್ನು ನಿರ್ವಂಚನೆಯಿಂದ ಮಾಡುವದು ಮನುಷ್ಯನ ಮೊದಲನೆ ಕರ್ತವ್ಯವಾದರೆ ಎರಡನೆಯದು ಇತರರ ಭಾವನೆಗಳಿಗೆ ಗೌರವವಿತ್ತು ನಡೆಯುವದು. ಹಲ ಬಗೆಯ ಜನರು ಸೇರಿದರೆ ಒಂದು ಜಗತ್ತು; ಆದುದರಿಂದ ಬೇರೆ ಬೇರೆ ಧರ್ಮ, ವೃತ್ತಿ, ಯೋಗ್ಯತೆಗಳುಳ್ಳ ವಿವಿಧ ಜನರನ್ನೊಳಗೊಂಡ ನಮ್ಮ ಸಮಾಜದಲ್ಲಿ ಎಲ್ಲರೂ ಶಾಂತಿ ಸೌಹಾರ್ದಗಳಿಂದ ಬಾಳಲು ಅವಕಾಶವುಳ್ಳ ಒಂದು ರೀತಿಯ ಜೀವನಪದ್ಧತಿ ಬೆಳೆದು ಬರುವಂತೆ ತನ್ನ ನಡೆನುಡಿಗಳನ್ನು ಯಾವ ನಾಗರಿಕನು ಇಟ್ಟುಕೊಳ್ಳುವನೋ ಅವನೇ ಗುಣವಂತರಲ್ಲಿ ಅಗ್ರಗಣ್ಯ.

— ರಾಜಾಜಿ

★

ಇಂದಿಗೂ ಶ್ರದ್ಧೆ, ಧ್ಯೇಯ ಇವುಗಳೇ ಪ್ರಗತಿಗೂ ಸೌಖ್ಯಕ್ಕೂ ಮುಖ್ಯ ಸಾಧನವಾಗಿ ಉಳಿದಿವೆ.

— ಜೀನ್ ಫಿನಟ್

★

ಮಿತವ್ಯಯವು ಬಹಳ ದೊಡ್ಡ ಉತ್ಪನ್ನದ ಸಾಧನವೆಂದು ತಿಳಿದುಕೊಳ್ಳದೆ ಜನರು ಕೆಡುವರು.

— ಸಿಸಿರೊ

LEST WE FORGET

ಮೇಲಿನ ನಕಾಶೆಯ ವಿವರಗಳಿಗೆ —ಪುಟ ೩



# ದೇಶಾಂತರಗಳಿಂದ

## ಪಾಲಿಸ್ತಾನದಲ್ಲಿ ಪುನರ್ಘರ್ಷಣ

ಸಂಯುಕ್ತ ರಾಷ್ಟ್ರ ಸಂಘವು ಅಮೇರಿಕದ ಸಂಯುಕ್ತ ಸಂಸ್ಥಾನದ ಜನರಲ್ ವಿಲಿಯಂ ರೈಲಿಯ ಮೂಲಕ ಅರಬರಿಗೂ ಇಸ್ರೇಲರಿಗೂ ಯುದ್ಧೋಪಸಂಹಾರದ ಅಪ್ಪಣೆಯನ್ನು ಕೊಡಲಾಗಿತ್ತು. ಕೊಟ್ಟದಿನವೇ ಇಸ್ರೇಲ್ ಸರಕಾರ ಅದನ್ನು ನಿರಾಕರಿಸಿತು. ಆದೇ ದಿನ ಅಂದರೆ ಕಳೆದ ೧೬ ರಲ್ಲಿ ಸಂಯುಕ್ತ ಸಂಸ್ಥಾನದ ವಕೀಲ ಮ್ಯಾಕ್‌ಡೊನಾಲ್ಡರ ಮೇಲೂ ಜೆರೂಸಲೇಮಿನಲ್ಲಿ ಶಾಂತಿ ನಿರೀಕ್ಷಕನಾಗಿ ಸಂ. ರಾ. ಸಂಘದಿಂದ ನಿಯುಕ್ತನಾಗಿದ್ದ ಕರ್ನಲ್ ಜಾರ್ಜ್ ಮಿಲೆಟ್ಟನಮೇಲೂ ಮಶಿನ್‌ಗನ್ ಹಾರಿಸಲಾಯಿತು. ಅದು ಅರಬರ ಕೃತ್ಯವೆಂದು ತಿಳಿದು ಬಂದಿದೆ. ಹೊಡೆದ ಮೂರೂ ಗುಂಡುಗಳು ಪುಣ್ಯವಶದಿಂದ ಅತಿ ಹತ್ತಿರದಲ್ಲಿ ಹಾರಿಹೋದರೂ ಮ್ಯಾಕ್‌ಡೋನಾಲ್ಡ್ ಮತ್ತು ಮಿಲೆಟ್ಟರಿಗೆ ತಾಗಲಿಲ್ಲ.

ಈಜಿಪ್ತಿನ ದಲಗಳು ಯೆಹೂದಿಗಳ ವಶತಿ ಇರುವ ನೆಗೇವಿನಲ್ಲಿ ದಾಳಿಗಾರಂಭಿಸಿದುದರಿಂದ ಅದನ್ನು ಪ್ರತಿಭಟಿಸಲು ಇಸ್ರೇಲ್ ಸೈನಿಕರು ನೆಲ ಮತ್ತು ಗಾಳಿಯಲ್ಲಿ ಅಗ್ನಿವೃಷ್ಟಿ ಮಾಡಿದರು. ಈಜಿಪ್ತಿನವರು ಹಿಡಿದ ಮೂರು ಪಟ್ಟಣಗಳನ್ನು ಇಸ್ರೇಲರು ದಾಳಿಗೀಡು ಮಾಡಿದರು. ಇಸ್ರೇಲಿನ ಪ್ರದೇಶದಲ್ಲಿ ಎಲ್ಲೆಲ್ಲೂ ಕತ್ತಲು ಕಾಯಿದೆಯನ್ನು ಆಚರಿಸಲಾಯಿತು.



ಸಂ. ರಾ. ಸಂಘದ ಸರ್ವ ಸದಸ್ಯರ ಸಭೆಯು ಪ್ರಥಮಾಧಿವೇಶನಕ್ಕೆ ಬ್ರಿ. ವಿದೇಶ ಮಂತ್ರಿ ಅರ್ನೆಸ್ಟ್ ಬೆವಿನ್ ಪ್ರತಿನಿಧಿ ಮಂಡಲದೊಡನೆ ನಡೆದುದು

## ಕುಮಿಂಟಾಂಗಿನ ಪರಾಜಯ

ರಾಷ್ಟ್ರೀಯ ಪಕ್ಷದ ಬಲಗೈಯೆನಿಸಿದ ಚಿಂಚೋವನ್ನು ಆಗಲೆ ಹಿಡಿದ ಚೀನೀ ಕಮ್ಯುನಿಸ್ಟರು ಚಿನ್ಸಿಯ ಮೇಲೆ ಸಂಪೂರ್ಣ ಎರಗಿದ್ದಾರೆ. ಚಿನ್ಸಿಯು ಸರಕಾರೀ ಪಕ್ಷದ ಕಡೆಯ ಪ್ರಬಲಸ್ಥಾನ. ಅದು ಮಂಚೂರಿಯದ ಮುನ್ನೆ ಅದಲ್ಲಿದೆ. ಇದರಿಂದ ಮಂಚೂರಿಯವನ್ನು ಪುನಃ ಗೆಲ್ಲಬೇಕೆಂದಿದ್ದ ಸರಕಾರದ ಎಲ್ಲ ಯೋಜನೆಗಳೂ ಮಣ್ಣುಪಾಲಾದಂತಾಯಿತು.

ಶಾಂಟಿಗ್--ಕಿಯಾಂಗ್ಸು-ಹೋನಾನ್ ಸೀಮಾ ಪ್ರದೇಶದಲ್ಲಿ ಹೊಸ ಅತಿ ಬೃಹತ್ಪ್ರಮಾಣದ ಕಮ್ಯುನಿಸ್ಟ ಪ್ರತಿಭಟನಾದಳ ರೂಪುಗೊಳ್ಳುತ್ತಿದೆಯೆಂದೂ ಅದು ಸೂಚೋ ಚಂಗ್‌ಚೋ ರೇಲ್ವೆ ನಗರಗಳ ಮೇಲೆ ಬೀಳಲಿದೆಯೆಂದೂ ತಿಳಿಯುತ್ತದೆ.

ರಾಷ್ಟ್ರೀಯ ಬಲದ ಉತ್ತರ ಚೀನದ ಸೇನಾಪತಿಯಾದ ಫುಕೊಸ್ತೋವಿ ಮಾತ್ರ ಜುಯುಂಗ್‌ಕ್ವಾನ್ ಕಣಿವೆಯಲ್ಲಿ ೧೦ ಸಾವಿರ ಕಮ್ಯುನಿಸ್ಟರನ್ನು ಕೊಂದು ಅವರ ಶಸ್ತ್ರಾಸ್ತ್ರಗಳನ್ನು ಕಸಿದುಕೊಂಡೆನೆಂದು ಹೇಳುತ್ತಾನೆ.

## ರಶಿಯ ಯುದ್ಧ ಸಾರೀತು!

ಪಶ್ಚಿಮ ಯುರೋಪಿಗೆ ಕಮ್ಯುನಿಜಮ್ಮನ್ನು ನೂಕಲು ರಶಿಯ ಒಂದು ವೇಳೆ ಯುದ್ಧ ಸಾರೀತು ಎಂದು ಅಮೇರಿಕದ ಮಿಲಿಟರಿ ಸರಕಾರದ ಅಧಿಕೃತ ವರದಿಯೊಂದು ಎಚ್ಚರಿಕೆ ಕೊಟ್ಟಿದೆ. ರಶಿಯ ಎದುರುನಿಂತು ಏಟಿಗೆ ಏಟಿಂಬುದಕ್ಕೆ ಅಂಜುವುದೆಂದು ತಿಳಿಯುವುದು ತಪ್ಪು ಎಂದು ಅಲ್ಲಿ ಹೇಳಲಾಗಿದೆ.

ಬರ್ಲಿನ್ನೊಂದು ನಿಮಿತ್ತ. ಅಲ್ಲಿ ರಶಿಯಕ್ಕೆ ಧ್ಯೇಯದೃಷ್ಟಿಯಲ್ಲಿ ಸೋಲು ಸಂಭವಿಸುವಂತಾದರೆ ಬರ್ಲಿನ್ ಮತ್ತು ಪಶ್ಚಿಮ ಯುರೋಪಿನಲ್ಲಿ ತನ್ನ ಹಿಡಿತವನ್ನು ಬಿಗಿಮಾಡುವುದರ ಸಲುವಾಗಿ ಅದೆಂದೂ ಯುದ್ಧಕ್ಕೆ ಕೈಹಾಕಲು ಹಿಂಜರಿಯದೆಂದು ಅಮೇರಿಕನ್ ವರದಿಗಾರರ ಮತ. ರಶಿಯನ್ನರು ಜೆಕೊಸ್ಲೋವೇಕಿಯದಲ್ಲಿ ಪಡೆದಂತಹ ಜಯವನ್ನೇ ಇಲ್ಲಿಯೂ ದಕ್ಕಿಸಿಕೊಂಡಾರು; ಅಲ್ಲದೆ ಸಂಧಾನ ಕ್ಕಿಂತ ಸಮರವನ್ನೇ ಯುಕ್ತವೆಂದು ಹಿಡಿದಾರು ಎಂಬುದಾಗಿಯೂ ಅವರೆನ್ನುತ್ತಾರೆ.

ಬರ್ಲಿನ್ನಿಗೆ ಸಾಮಗ್ರಿಗಳನ್ನು ಸಾಗಿಸುವುದರ ಸಲುವಾಗಿ ಅಮೇರಿಕ, ಬ್ರಿಟನ್ ಮತ್ತು ಫ್ರಾನ್ಸಿನ ವಿಮಾನದಳಗಳನ್ನು ಒಟ್ಟುಗೂಡಿಸಲಾಗಿದೆಯೆಂದು ಇತ್ತೀಚಿನ ಸುದ್ದಿ.

## ಮಾಲನ್ ಸರಕಾರದ ನಾಜೀ ಧೋರಣ

ದ. ಆಫ್ರಿಕದಲ್ಲಿ ಮಾಲನ್ನರ ಸರಕಾರದಿಂದ ಪ್ರಜಾಸತ್ತೆಯ ತತ್ವಗಳನೇಕವನ್ನು ಭಂಗಿಸಿ ಸ್ವಚ್ಛಂದವಾಗಿ ಸಾಗಿದೆ. ಅದರ ಶಾಸನ ಸಭೆಯಲ್ಲಿ ಕುಲಭೇದ ನೀತಿಯನ್ನು ಆಚರಣೆಗೆ ತರುವ ಬಗ್ಗೆ ತ್ವರಿತಗತಿಯಿಂದ ಮಸೂದೆಗಳು ಪಾಸಾಗಲಿವೆ. ಹಿಂದೀಯರಿಗೆ ಇದ್ದ ಮತದಾನದ ಹಕ್ಕನ್ನು ತೆಗೆವ ಮಸೂದೆಯೆ ಪ್ರಥಮ ವಾಚನ ಮುಗಿದಿದೆ. ಅಲ್ಲಿಯ ರಾಷ್ಟ್ರೀಯ ಪಕ್ಷದವರು ಕ್ರಮೇಣ ಬಣ್ಣದ ಜನರೆಲ್ಲರನ್ನೂ ಬಹಿಷ್ಕೃತರನ್ನಾಗಿ ಮಾಡುವ ಸುದೀರ್ಘ ಯೋಜನೆಯೊಂದನ್ನು ದೃಷ್ಟಿಯಲ್ಲಿಟ್ಟುಕೊಂಡು ಕೆಲಸ ಮಾಡುತ್ತಿರುವುದಾಗಿ ವದಂತಿಯಿದೆ. ಅವರಿಗೆ ಮಿತ ಪ್ರಮಾಣದಲ್ಲಿ ಶರ್ತುಗಳಿಗೊಳಗಾದ ಆಫ್ರಿಕನ್ನರಿಗಿರುವ ಮತಾಧಿಕಾರವನ್ನು ಮಾತ್ರ ಉಳಿಸಬೇಕೆಂದು ಅವರ ಉದ್ದೇಶವಂತೆ. ಮೂಲ ನಿವಾಸಿಗಳ ಮೇಲಿನ ಕೋಪಣ ಶಾಸನವನ್ನು ತೆಗೆದುಹಾಕಿ ಅವರ ಬೆಂಬಲ ಹಿಂದೀಯರಿಗೆ ಸಿಗದಂತೆ ಮಾಡುವ ಗತ್ತುಗಾರಿಕೆಯೂ ನಡೆದಿದೆ.

## ಬೃಹತ್ ಹೈದರಾಬಾದದ ಯೋಜನೆ
### ರಾಕ್ಷಸೀ ಮಹತ್ವಾಕಾಂಕ್ಷೆ ಮಣ್ಣುಕೂಡಿತು

ಕಾಶ್ಮೀರ ಮತ್ತು ಇತರ ಅಂತರಂಗ ಕೂಟಗಳ ಮೂಲಕ ಹಿಂದುಸ್ಥಾನ ಸರಕಾರ ದುರ್ಬಲ ಮಾಡಲಾರದು. ಕೇವಲ ದಾಯಿಜಿದರಿಕೆ ಹಾಕುತ್ತದೆ; ಹಿಂಜುವೇಳೆ ಯುದ್ಧ ಹೂಡಿದರೂ ಪಾಕಿಸ್ತಾನವು ತಮ್ಮ ಸಹಾಯಕ್ಕೆ ಬರುವದು ಎಂದು ಮುಂತಾದ ಗಾಳಿಗೋಪುರಗಳನ್ನು ಕಟ್ಟಿಕೊಂಡು ಇತ್ತೆಹಾದ ಮುಸ್ಲಿಮ ಸಂಸ್ಥೆಯ ಧುರೀಣನಾದ ಕಾಶೀಮರಜ್ವಿಯು ಹೈದರಾಬಾದ ನಿಜಾಮರನ್ನು ಮತ್ತು ಧರ್ಮಾಂಧ ಮುಸಲ್ಮಾನರನ್ನು ಅಡ್ಡ ಹಾದಿ ಹಿಡಿಸಿದನು. ಹೈದರಾಬಾದ ಮುಖ್ಯಮಂತ್ರಿ ಲಾಯಿಕಅಲ್ಲಿ ಮತ್ತು ಕಾಶೀಮ ರಜವಿಯವರು ಹೈದರಾಬಾದಕ್ಕಾಗಿ ಸ್ವಾತಂತ್ರ್ಯವನ್ನು ಸಂಪಾದಿಸಬೇಕೆಂದಿಷ್ಟೇ ಹಂಬಲ ತಾಳದೆ ವಿಂಧ್ಯದಿಂದ ರಾಮೇಶ್ವರದ ವರೆಗಿನ ದಕ್ಷಿಣ ಹಿಂದುಸ್ಥಾನವನ್ನೆಲ್ಲ ಆಕ್ರಮಿಸಬೇಕೆಂಬ ರಾಕ್ಷಸೀ ಮಹತ್ವಾಕಾಂಕ್ಷೆಯನ್ನು ತಾಳಿದರು. ಅವರ ಅರಾಕ್ಷ ಮಹತ್ವಾಕಾಂಕ್ಷೆಯ ನಿದರ್ಶನವೆಂದು ಅವರು ಪ್ರಸಿದ್ಧಿಸಿದ ನಕಾಶೆ ಇದೀಗ ದೊರೆತಿದ್ದು ಅದನ್ನು ಮುಖಪುಟದಲ್ಲಿ ಕೊಡಲಾಗಿದೆ. ಕಾಶೀಮ ರಜ್ವಿಯ ಬಗಲಗೂಸೂ ಲಾಯಕಅಲ್ಲಿ ಮಂತ್ರಿಮಂಡಲದಲ್ಲಿ ಶಿಕ್ಷಣ ಮಂತ್ರಿಯೂ ಆಗಿದ್ದ ಶ್ರೀ ಬಿ. ಎಸ್. ವೆಂಕಟರಾಯರು ಈ ನಕಾಶವನ್ನು ಪ್ರಕಟಿಸಿದ್ದಾರೆ. ಇದರ ಹೆಸರು 'ಮಾಮ್ಲಿಕತ್ ಅಸಫಿಯಾ' ಹಿಂದಿನ ಇಂದಿನ ಮತ್ತು ಮುಂದಿನ ಅಸಫಿಯಾ ರಾಜ್ಯದ ವರ್ಣನೆಯೇ ಇದರ ಉದ್ದೇಶ. ಇದರಲ್ಲಿ ಪಾಕಿಸ್ತಾನವು ಅಚ್ಚಹಸಿರು ಬಣ್ಣದಲ್ಲಿ ಕಾಶ್ಮೀರು ತಿಳಿಹಸಿರು ಬಣ್ಣದಲ್ಲಿ ಪ್ರಕಟಿಸಲಾಗಿದೆ. ಕಾಶ್ಮೀರು ಪಾಕಿಸ್ತಾನದ ಅಂಗವೆಂದು ಇವರ ಅಭಿಪ್ರಾಯ. ಈಗಿನ ಹೈದರಾಬಾದ ಪ್ರದೇಶವು ಅಚ್ಚಹಳದಿಯಲ್ಲಿ ಕಾಣಿಸಲಾಗಿದ್ದು ಬೃಹತ್ ಹೈದರಾಬಾದ ಯೋಜನೆಯಲ್ಲಿ ಬರುವ ಉತ್ತರ ಸರಕಾರ, ಇಡೀ ಮದ್ರಾಸ ಪ್ರಾಂತ ಮೈಸೂರು ಸಂಸ್ಥಾನ ಹಾಗು ಮುಂಬಯಿ ಮತ್ತು ಮಧ್ಯಪ್ರಾಂತದ ಕೆಲ ಭಾಗಗಳು ತಿಳಿ ಹಳದಿಯಲ್ಲಿ ಕಾಣಿಸಲ್ಪಟ್ಟಿವೆ. ಉಳಿದದ್ದನ್ನೆಲ್ಲ ಕೆಂಪು ಬಣ್ಣದಲ್ಲಿ ತೋರಿಸಿದೆ ಅದೆಲ್ಲ ಹಿಂದುಸ್ತಾನದ ಭಾಗವೆಂದು ತೋರಿಸುವದಕ್ಕೆ. ಟೀಪುಸುಲ್ತಾನನ ವಂಶಜನೊಬ್ಬನು ಈ ಯೋಜನೆಯ ಯೋಜಕರಲ್ಲೊಬ್ಬನಿದ್ದುದರಿಂದ ಮೈಸೂರನ್ನು ಸೇರಿಸಿಕೊಳ್ಳಲಾಗಿದೆಯಂತೆ. ಇದನ್ನೆಲ್ಲ ಹೇಗೆ ಎತ್ತಿ ಹಾಕಬೇಕೆಂದು ಮಾಡಿದ್ದರೆಂಬುದು ಈ ನಕಾಶೆಯ ಕೆಳಗೆ ಉರ್ದುವಿನಲ್ಲಿ ಬರೆದ ಸೂಚನೆಗಳಿಂದ ಗೊತ್ತಾಗುವದು. ಅದರ ಅನುವಾದವಿಂತಿದೆ.

### ನಾವು ಮರೆಯದಿರೋಣ

ಯುದ್ಧದ ಸೋಲು ಗೆಲವುಗಳ ಪರಿಣಾಮವಾಗಿ ರಾಷ್ಟ್ರಗಳ ಕ್ಷೇತ್ರವು ಕಡಿಮೆಯಾಗುತ್ತದೆ ಹಾಗೂ ಬೆಳೆಯುತ್ತದೆ. ಅದರ ಬಗ್ಗೆ ವಾದವಿಲ್ಲ. ಆದರೆ ನಮ್ಮ ದಾದ ಹಾಗೂ ಇನ್ನೂ ನಮ್ಮ ಹಕ್ಕು ಇದ್ದ ಪ್ರದೇಶವನ್ನು ನಾವು ಪ್ರಾಪ್ತಮಾಡಿಕೊಳ್ಳಬೇಕು.

ಮೊದಲನೆಯ ಆಸಫ್ ಜಾಹನ ಮರಣದ ನಂತರ ಜರುಗಿದ ಮರಾಠಾ ಯುದ್ಧದಲ್ಲಿ, ಹೈದರಾಬಾದದವರಿಗೆ ಫ್ರೆಂಚ ಸೈನ್ಯದ ಸಹಾಯ ದೊರೆಯಿತು. ಅದಕ್ಕಾಗಿ ಕೆಲವು ಭಾಗಗಳನ್ನು ಅವರಿಗೆ ಕೊಡಲಾಯಿತು. ಅದು ಕೇವಲ ಜಹಗೀರ ಭೂಮಿಯೆಂತಿದ್ದು ಮಾಲ್ಕಿ ಹಕ್ಕನ್ನು ಬಿಟ್ಟುಕೊಟ್ಟಿಲ್ಲ.

ಬ್ರಿಟಿಶರಿಗೆ ಕೊಟ್ಟ ಭೂಮಿಗಳನ್ನು ಕೆಲವೊಂದು ಕರಾರುಗಳ ಮೇಲೆ ಕೊಟ್ಟಿದೆ. ಆ ಕರಾರುಗಳನ್ನು ಈಗಿನ ದಿಲ್ಲಿ ಸರಕಾರವು ಸಹ ಒಪ್ಪಿದೆ.

೧೭೫೯ ರಲ್ಲಿ ನಿಜಾಮರು ಈಸ್ಟ ಇಂಡಿಯಾ ಕಂಪನಿಗೆ ಮಚ್ಛಲಿಪಟ್ಟಣವನ್ನು ಜಹಗೀರ ಎಂದು ಕೊಟ್ಟಿದ್ದರು. ಜಹಗೀರದಾರನು ಸತ್ತ ನಂತರ ಆ ಜಹಗೀರ ಒಡೆಯನಿಗೆ ಮರಳಿ ಬರಬೇಕು.

೧೭೬೬ ಮತ್ತು ೧೭೬೮ ರ ಸಮಯದ ಉತ್ತರದ ಚಿಕ್ಕಾಕೋಲ, ರಾಜಮಹೇಂದ್ರಿ, ಕೊಂಡಪಲ್ಲಿ, ಗುಂಟೂರ, ಕರ್ನಾಟಕ ಬಾಲಾಘಾಟ ಮತ್ತು ವಿಜಾಪೂರ, ಇವುಗಳ ಪಟ್ಟಿಯನ್ನು ವಸೂಲ ಮಾಡಬೇಕು ಮತ್ತು ನಿಜಾಮರ ಬೊಕ್ಕಸಕ್ಕೆ ಏಳು ಲಕ್ಷ ರೂ ತುಂಬಬೇಕೆಂಬ ಕರಾರಿನಿಂದ ಈಸ್ಟ ಇಂಡಿಯಾ ಕಂಪನಿಗೆ ಕೊಡಲಾಗಿತ್ತು. ಕರ ಕೊಡುವ ವರೆಗೆ ಒಡೆತನ ಅವರದು, ನಂತರ ನಮ್ಮದು.

ಹೈದರಾಬಾದಕ್ಕೆ ಹೆಚ್ಚಿನ ಸೈನ್ಯದ ಸಹಾಯವನ್ನೊದಗಿಸಲು ೧೭೯೨ ಮತ್ತು ೧೭೯೯ರಲ್ಲಿ ಮೈಸೂರನ್ನು ಮತ್ತು ಕಡಪಾ, ಕರ್ನೂಲು ಹಾಗೂ ಬಳ್ಳಾರಿ ಜಿಲ್ಲೆಗಳನ್ನು ಬ್ರಿಟಿಶರಿಗೆ ಕೊಡಲಾಗಿತ್ತು.

ಮೈಸೂರು ಸ್ವತಂತ್ರವಾಗಲಿಚ್ಛಿಸಿದ್ದರಿಂದ ಅದನ್ನು ಪ್ರತ್ಯೇಕಿಸಲಾಯಿತು ಅದೀಗ ಹಿಂದುಸ್ತಾನದ ವಶದಲ್ಲಿದೆ. ಆದರೆ ಒಪ್ಪಂದದ ಪ್ರಕಾರ ಅದರ ಅರ್ಧ ಪಾಲು ನಿಜಾಮರಿಗೆ ಬರಬೇಕು.

೧೮೫೩ ರಲ್ಲಿ ಬ್ರಿಟಿಶರು ವರ್‍ಹಾಡವನ್ನು ಒತ್ತಾಯದಿಂದ ಕಸಿದುಕೊಂಡರು ೧೮೬೦ ರಲ್ಲಿ ಮೊದಲೇ ಸಿಕ್ಕಿದ್ದ ಭದ್ರಾಚಲಂ ಪ್ರದೇಶವನ್ನು ವಿಸ್ತರಿಸಿಕೊಂಡರು.

ಈಗ ದಿಲ್ಲಿ ಮತ್ತು ಹೈದರಾಬಾದಿನ ನಡುವೆ ಹೊಸ ಒಪ್ಪಂದವಾಗಿದ್ದು ಅದರನ್ವಯ ನಾವು ಹಿಂದೀ ಸೈನ್ಯದ ಸಹಾಯ ಕೇಳುವದಿಲ್ಲ ಹಾಗೂ ಹಿಂದುಸ್ತಾನವಾದರೂ ನಮ್ಮಲ್ಲಿ ಸೈನ್ಯವನ್ನಿಡುವದಿಲ್ಲ. ಆದುದರಿಂದ ಸೈನ್ಯ ಸಹಾಯಕ್ಕಾಗಿ ಬಿಟ್ಟುಕೊಟ್ಟ ಪ್ರದೇಶಗಳನ್ನು ಈಗ ಮರಳಿ ಕೊಡಬೇಕು.

[ಈ ನಕಾಶೆಯು ಇದು ವರೆಗೆ ಅತ್ಯಂತ ಗುಪ್ತವಾಗಿಡಲ್ಪಟ್ಟಿತ್ತು. ಇದೀಗ ಎಫ್. ಓ. ಎಫ್. ಸಂಸ್ಥೆಯ ಕೈಗೆಬಿದ್ದಿದೆ.]

## ಮಲಯದಲ್ಲಿ ಕೂಟಯುದ್ಧ

ಮಲಯದ ಪಶ್ಚಿಮ ಪಹಾಂಗ್ ಅರಣ್ಯ ಭಾಗದಲ್ಲಿ ನಡೆಸಿದ ಕೂಟ ಯುದ್ಧದ ವಿರುದ್ಧ ಬ್ರಿಟಿಶರು ವಿಶೇಷ ಸಜ್ಜಿನಾದ ಬಾಂಬಿನ ದಾಳಿ ಮಾಡಿ ಶತ್ರುಗಳನ್ನು ಹಿಮ್ಮೆಟ್ಟಿಸುತ್ತಿರುವುದಾಗಿ ಸುದ್ದಿ. ಈ ದಾಳಿಗೆ ತಿಂಗಳುಗಟ್ಟಲೆ ತಯಾರಿಕೆ ನಡೆದಿತ್ತು. ಉತ್ತರದ ಪೆರಾಕೆಂಬಲ್ಲಿಯೂ ಪೋಲೀಸು ದಳಗಳು ಅತಿ ಹೆಚ್ಚಿನ ಗಲಭೆಯ ಸ್ಥಳಗಳಲ್ಲಿ ತಮ್ಮ ದಾಳಿಯನ್ನು ಅಜಸ್ರವಾಗಿ ಸಾಗಿಸಿದ್ದಾರೆ. ೫೦೦ ಚೀನೀ ಸುಪುಗಾರರನ್ನು ಓಡಿಸಿದ್ದಲ್ಲದೆ, ಅವರ ನೂರು ಮನೆಗಳನ್ನು ಸುಡಲಾಯಿತು ೫ ಜನ ದಂಗೆಗಾರರನ್ನು ಹಿಡಿದು ಬಂಧನದಲ್ಲಿಡಲಾಗಿದೆ. ಇದೇ ಪ್ರಕಾರ ದಂಗೆಗಾರರನ್ನು ಸುತ್ತುಗಟ್ಟಿ ಹಿಡಿಯುವದು ನಡೆಯುತ್ತಿದೆ.

## ನಿಃಶಸ್ತ್ರೀಕರಣ

ಪ್ಯಾರಿಸ್ಸಿನಲ್ಲೀಗ ನಡೆಯುತ್ತಿರುವ ಸಂ. ರಾ. ಸಂಘದ ನಿಃಶಸ್ತ್ರೀಕರಣದ ಉಪ ಸಮಿತಿಯ ಸಭೆಯಲ್ಲಿ ರಶಿಯ ತಂದ ನಿಃಶಸ್ತ್ರೀಕರಣ ಮಸೂದೆಗೆ ಚೀನದ ಪ್ರತಿನಿಧಿ ಡಾ. ತಿಂಗ್‌ಫು ಎಫ್ ತ್ಸಿಯಾಂಗರು ವಿರೋಧವನ್ನು ವ್ಯಕ್ತಮಾಡಿದರೆಂದು ತಿಳಿಯುತ್ತದೆ. ಈ ಮಸೂದೆಯಿಂದ ಚೀನೀ ಕಮ್ಯುನಿಸ್ಟರಿಗೆ ಬಹಳ ಅನುಕೂಲವಾಗುವುದೆಂದು ಆ ೧೧ ರಾಷ್ಟ್ರಗಳ ಉಪಸಮಿತಿಯಲ್ಲಿ ಹೇಳಿಕೆ ಕೊಟ್ಟರು.

ಅವರು ಮತ್ತೂ ಹೇಳಿದ್ದೇನೆಂದರೆ, ಭದ್ರತಾ ಮಂಡಲವು ಸಂ. ರಾ. ಸಂಘದ ತಾವ್ರಪಟ್ಟಿಯ ತತ್ವಗಳಂತೆ ವರ್ತಿಸುತ್ತಿದ್ದರೆ ಆ ಮಾತೇ ಬೇರೆ. ಅಲ್ಲದೆ ರಾಷ್ಟ್ರಗಳ ನಡುವಣ ರಾಜಕೀಯ ವಾತಾವರಣ ಕೂಡ ಇಂದು ಅಷ್ಟು ಹಿತಕರವಾಗಿಲ್ಲ. ಎಪ್ಪತ್ತನೆ ಕಲಮು ಅಂತರರಾಷ್ಟ್ರೀಯ ದಲವೊಂದನ್ನು ಸ್ಥಾಪಿಸಿದಲ್ಲಿ ಮಾತ್ರ ನಿಃಶಸ್ತ್ರೀಕರಣ ಪ್ರಗತಿ ಹೊಂದೀತು. ಹಾಗಲ್ಲದೆ ಈಗಿಂದೀಗ ರಶಿಯ ಹೇಳಿದಂತೆ ನಿಃಶಸ್ತ್ರೀಕರಣವನ್ನು ಕೈಕೊಂಡರೆ ಅನಾಹುತ ಸಂಭವಿಸದಿರದು.

ಫ್ರಾನ್ಸಿನ ಪ್ರತಿನಿಧಿಯೂ ರಶಿಯದ ಸಲಹೆಯನ್ನು ವಿರೋಧಿಸಿದನು. ಅವನು ಕೊಟ್ಟ ಕಾರಣವೆಂದರೆ, ಸೋವಿಯಟ್ ತಂದ ಮಸೂದೆ ಕೇವಲ ಅವ್ಯವಹಾರ್ಯವಾದುದು. ಅದಕ್ಕಿಂತ ಈಗ ಎಲ್ಲ ದೇಶಗಳ ಸಜ್ಜಿತ ಸೈನ್ಯಗಳ ಲೆಕ್ಕವನ್ನು ತೆಗೆದುಕೊಂಡು ಅದರ ಮೇಲೆ ಪರಿಣಾಮಕಾರಿಯಾದ ನಿಯಂತ್ರಣವನ್ನಿಡುವುದೇ ಮೇಲು. ಈ ಪ್ರತಿನಿಧಿಯ ಮಾತಿಗೆ ಬೆಲ್ಜಿಯಮ್ಮಿನ ಪ್ರತಿನಿಧಿ ಬೆಂಬಲ ಕೊಟ್ಟನು. ಆದರೆ ಪೋಲಂಡಿನ ಪ್ರತಿನಿಧಿ ರಶಿಯದ ಸಲಹೆಗೇ ತನ್ನ ಅಭಿಮತವನ್ನು ವ್ಯಕ್ತಪಡಿಸಿ ಅದು ಅಂಗೀಕೃತವಾಗಬೇಕೆಂದನು. ಅಂತೂ ಸಭೆ ಮುಂದುವರಿಯುತಲ್ಲದೆ ಈಗ ಕೊನೆಯ ತೀರ್ಪಿಗೆ ಬರಲಿಲ್ಲ.

# ಹೈದ್ರಾಬಾದದಲ್ಲಿ ಶಾಂತಿ ಸುವ್ಯವಸ್ಥೆ ನೆಲಸಿವೆ

## ಮೊಯಿನ ನವಾಜ ಜಂಗರು ಕರಾಚಿಗೆ ಓಡಿಬಂದಿದ್ದಾರೆ

### ನನಗೆ ಎಂದಿನಂತೆ ರಾಜಮರ್ಯಾದೆ ಸಲ್ಲುತ್ತಿದೆ

ಭದ್ರತಾ ಮಂಡಲದಲ್ಲಿ ಮುಖಭಂಗ ಹೊಂದಿ ಮತ್ತು ನಿಜಾಮರಿಂದಲೂ ಪದಚ್ಯುತಿ ಹೊಂದಿ ಹೈದರಾಬಾದ ಶಿಷ್ಟಮಂಡಳದ ಧುರೀಣರಾಗಿ ಹೋದ ನವಾಜ ಮೊಯಿನ ನವಾಜ ಜಂಗರು ಕರಾಚಿಗೆ ಮರಳಿದ್ದಾರೆ. ಹೈದರಾಬಾದ ವಿಚಾರಣೆಯಲ್ಲಿ ತಾತ್ಪೂರ್ತಿಕ ಭಾಗವಹಿಸುವದಿಲ್ಲವೆಂದೂ ಹೈದರಾಬಾದದ ಬಗ್ಗೆ ನಿಜಸಂಗತಿಯನ್ನು ಸಂಗ್ರಹಿಸುವೆನೆಂದೂ ನೆವ ಹೇಳಿ ಮೋರೆ ತಿಪ್ಪಿಸಿಕೊಂಡು ಬಂದಿದ್ದಾರೆ. ಹೀಗಿದ್ದೂ ಹೈದರಾಬಾದ ಪ್ರಕರಣವನ್ನು ಭದ್ರತಾ ಮಂಡಲದಿಂದ ಹಿಂತೆಗೆದುಕೊಳ್ಳುವದಿಲ್ಲನೆಂದು ಹೇಳಿದ್ದಾರೆ.

ಹೈದರಾಬಾದದಲ್ಲಿ ಸಾರ್ವತ್ರಿಕ ಚುನಾವಣೆಗಳು ನಡೆವ ಮೊದಲು ಜನಗಣತಿ ನಡೆಯಬೇಕೆಂದು ಮಿಲಿಟರಿ ಗವರ್ನರ ಮೇ. ಜ. ಚೌಧರಿಯವರು ಆಜ್ಞೆ ಹೊರಡಿಸಿದ್ದು ಈ ಬಗ್ಗೆ ತಕ್ಕ ಚಟುವಟಿಕೆಗಳು ನಡೆದಿವೆ. ಈಗ ಪರಿಸ್ಥಿತಿಯು ಸುಧಾರಿಸಿದ್ದರಿಂದಲೂ ಕಾಯದೆ ವ್ಯವಸ್ಥೆ ನೆಲಸಿದ್ದರಿಂದಲೂ ವಕೀಲರು ಹೈದರಾಬಾದ ನ್ಯಾಯಾಲಯಗಳಿಗೆ, ಹಾಕಿದ ಬಹಿಷ್ಕಾರವನ್ನು ಈಗ ಹಿಂತೆಗೆದುಕೊಂಡಿದ್ದು ವಕೀಲರೆಲ್ಲ ಪುನಃ ಕೆಲಸಕ್ಕೆ ಹೋಗಬೇಕೆಂದು ನಿರ್ಣಯಿಸಿದ್ದಾರೆ.

ಕಾಂಗ್ರೆಸ ಮುಖಂಡರೂ ಮತ್ತು ಪ್ರತಿಷ್ಠಿತ ಮುಸಲ್ಮಾನರೂ ಸಂಸ್ಥಾನದಲ್ಲೆಲ್ಲ ಸುತ್ತಿ ಶಾಂತಿ ಸೌಹಾರ್ದದ ಸಂದೇಶ ಬೀರುತ್ತಿರುವರಲ್ಲದೆ ರಜಾಕಾರರನ್ನು ಶೋಧಿಸಿಯೂ ಕೊಡುತ್ತಿದ್ದಾರೆ. ಸಂಸ್ಥಾನದಲ್ಲೆಲ್ಲ ಹೊಸ ಪೋಲೀಸ ಅಧಿಕಾರಿಗಳನ್ನು ನೇಮಿಸಲಾಗಿದೆ. ರಾಜಕೀಯ ಚಟುವಟಿಕೆಗಳ ಬಗ್ಗೆ ವಿದ್ಯಾರ್ಥಿಗಳ ಮೇಲೆ ಹಾಕಲಾದ ಖಟ್ಲೆಗಳನ್ನೆಲ್ಲ ರದ್ದುಪಡಿಸಲಾಗಿದೆಯಲ್ಲದೆ ಪರೀಕ್ಷೆಗಳನ್ನು ಮುಂದೆ ಹಾಕಬೇಕೆಂಬ ವಿದ್ಯಾರ್ಥಿಗಳ ಬೇಡಿಕೆಯನ್ನೂ ಮನ್ನಿಸಲಾಗಿದೆ. ಈದ ಹಬ್ಬವನ್ನು ಮುಸಲ್ಮಾನರು ಜಾತೀಯ ಸೌಹಾರ್ದದಿಂದ ಆಚರಿಸಿದರು.

### ಹಣ ಹಂಚಿನಬಿಲ್ಲೆಯಾಯ್ತು

ಲಾಯಕ ಅಲಿ ಮಂತ್ರಿ ಮಂಡಳವು ಸರಕಾರದ ಹಣವನ್ನು ಪುಂಡುಗಾರಿಕೆಯಲ್ಲಿಯೂ ಸ್ವಾರ್ಥ ಸಾಧನೆಯಲ್ಲಿಯೂ ಹೇಗೆ ಸೂರಿ ಬಿಟ್ಟಿದ್ದಾರೆಂಬುದರ ವಿವರಗಳನ್ನು ಹೊಸ ಆಡಳಿತೆಗಾರರು ಹುಡುಕಿ ತೆಗೆದಿದ್ದು ೬ ಕೋಟಿ ರೂ ಗಿಂತ ಹೆಚ್ಚು ಹಣವು ಅಕ್ರಮವಾಗಿ ಅವರಿವರ ಜೇಬು ಸೇರಿದೆಯೆಂದೂ ಇದರಲ್ಲಿ ೧ ಲಕ್ಷ ಪೌಂಡು ಸಿಡ್ನೆ ಕಾಟನ್ನಿಗೇ ಮುಟ್ಟಿದೆಯೆಂದೂ ೧ ಲಕ್ಷ ರೂ. ಗಳಷ್ಟನ್ನು ಪಾಕಿಸ್ತಾನದ ವಿದೇಶ ಮಂತ್ರಿ ಸರ ಜಾಫರುಲ್ಲಾಖಾನರಿಗೆ ಕೊಡಲಾಗಿದೆಯೆಂದೂ ೩ ಕೋಟಿ ರೂ. ಗಳನ್ನು ಪಾಕಿಸ್ತಾನಕ್ಕೆ ಕಳಿಸಲಾಯಿತೆಂದೂ ತಿಳಿಯುತ್ತದೆ. ಇದಲ್ಲದೆ ಗೋವೆಯನ್ನು ಕೊಂಡುಕೊಳ್ಳುವ ಬಗ್ಗೆ ಕೇವಲ ಮಾತುಕತೆ ನಡೆಸಲು ಸರ ಅಲಿಗ್ಯಾಂಡರ ರೋಜರ್ಸ ಎಂಬವನಿಗೆ ೧॥ ಲಕ್ಷ ರೂ. ಗಳಷ್ಟು ಕೊಡಲಾಗಿದೆಯೆಂದುಗೊತ್ತಾಗಿದೆ

ನಿಜಾಮ ಸರಕಾರದ ವಿದೇಶ ಶಾಖೆಯನ್ನೂ ಅದಕ್ಕೆ ಹೊಂದಿಕೊಂಡಿದ್ದ ವಿದೇಶ ಪ್ರಚಾರ ಶಾಖೆಯನ್ನೂ ರದ್ದುಗೊಳಿಸಲಾಗಿದೆ. ಹಳ್ಳಿಗಳಲ್ಲಿ ರಜಾಕಾರರ ಪ್ರಚಾರಕ್ಕಾಗಿ ೧೧ ಲಕ್ಷ ರೂ. ವೆಚ್ಚವಾಗಿದ್ದು ಕಂಡು ಬಂದಿದೆ.

### ಮಿಲಿಟರಿ ಹೇ... ...ಕಾರ

...ಟರಿ ಗವರ್ನರರು ನಿಜಾಮರು ಶರಣಾಗತಿಯ ದಿನ ನಿಯಮಿಸಿದ ಸಲಹೆ ಸಮಿತಿಯನ್ನು ವಿಸರ್ಜಿಸಿ ತಾ.೧೮ರಿಂದ ಹೊಸ ಮಿಲಟರಿ ಸರಕಾರವು ಅಧಿಕಾರವಹಿಸಿದೆಯೆಂದೂ ಅದರಲ್ಲಿ ಸ್ವತಃ ಮಿಲಟರಿ ಗವರ್ನರರು, ಶ್ರೀ. ಬಖಲೆ, ಶ್ರೀ. ಜೈನಯಾರಜಂಗಬಹದ್ದೂರ, ಶ್ರೀ. ಡಿ. ಆರ್. ಪ್ರಧಾನ, ರಾಜಾ ಧೊಂಡಿರಾಜ ಮೊದಲಾದವರನ್ನು ನಿಯಮಿಸಿಕೊಳ್ಳಲಾಗಿದೆಯೆಂದೂ ವಿಶೇಷ ಗ್ಯಾಝಿಟ ಮೂಲಕ ಸಾರಲಾಗಿದೆ.

ಸ್ವಂತ ಗವರ್ನರರು ಸೈನ್ಯ, ಪೋಲೀಸಶಾಖೆ, ರೇಲ್ವೆಯನ್ನುಳಿದು ಎಲ್ಲ ಸಂಪರ್ಕ ಶಾಖೆಯನ್ನು ತಮ್ಮ ಕಡೆಗೆ ಇಟ್ಟುಕೊಂಡಿದ್ದಾರೆ.

ಹೈದರಾಬಾದದ ಮೊದಲಿನ ಡೈರೆಕ್ಟರ ಜನರಲ ಆಫ್ ಪೋಲೀಸರಾಗಿದ್ದ ನವಾಬ ದೀನಯಾರ ಜಂಗರನ್ನು ಸಸ್ಪೆಂಡ ಮಾಡಲಾಗಿದೆ. ಪಾಕಿಸ್ತಾನದಲ್ಲಿ ಹೈದರಾಬಾದದ ಏಂಜಂಟ ಜನರಲರಾಗಿದ್ದ ಮುಸ್ತಾಕ ಅಹಮದಖಾನರು ತಮ್ಮ ಸ್ಥಳಕ್ಕೆ ರಾಜೀನಾಮೆ ಕೊಟ್ಟಿದ್ದು ತಾವು ಇನ್ನು ಹೈದರಾಬಾದಕ್ಕೆ ಬರುವದಿಲ್ಲವೆಂದು ಹೈದರಾಬಾದ ಸರಕಾರಕ್ಕೆ ತಿಳಿಸಿದ್ದಾರೆ.

ಹೈದರಾಬಾದದಲ್ಲಿ ಲೂಟಿ ಮಾಡುವವರಿಗೆ ಗೊಂದಲ ಎಬ್ಬಿಸುವವರಿಗೆ ಛಟಕಿ ಶಿಕ್ಷೆ ವಿಧಿಸಬೇಕೆಂದು ಸೈನಿಕ ಸರಕಾರವು ನಿರ್ಧರಿಸಿದೆ. ಲೂಟಿಯಲ್ಲಿ ತೊಡಗಿದ ೪೦ ಜನರಿಗೆ ತಾ. ೮ ರಂದು ಸಿಕಂದರಾಬಾದದ ಸಾರ್ವಜನಿಕ ಸ್ಥಳದಲ್ಲಿ ತಲಾ ೨೪ ರಂತೆ ಛಟಕಿ ಹೊಡೆಯಲಾಯಿತು. ಈ ಉಗ್ರ ಕ್ರಮವನ್ನು ಜಾತಿ ಭೇದವಿಲ್ಲದೆ ಅನುಸರಿಸಲಾಗುತ್ತಿದೆ.

### ನಿಜಾಮರ ಫರ್ಮಾನ

ತಾ. ೬ ರಂದು ನಿಜಾಮರು ಒಂದು ಫರ್ಮಾನ ಹೊರಡಿಸಿ ತಾವು ಯಾರ ಒತ್ತಾಯಕ್ಕೂ ಒಳಗಾಗಿಲ್ಲವೆಂಬೂ ತಮಗೆ ಸಲ್ಲಬೇಕಾದ ರಾಜಮರ್ಯಾದೆಯು ಅಬಾಧಿತವಾಗಿ ಸಲ್ಲುತ್ತಿದೆಯೆಂದೂ ಈ ಬಗ್ಗೆ ಕುಹಕರು ಇಲ್ಲದ ಅಪಪ್ರಚಾರ ಮಾಡುತ್ತಿದ್ದಾರೆಂದೂ ಸಾರಿದ್ದಾರೆ.

ಇದೇ ನವೆಂಬರ ತಾ. ೧ ರೊಳಗೆ ಹೈದರಾಬಾದದಲ್ಲಿ ಈಗಿದ್ದ ೫೦ ಸಾವಿರ ಸೈನಿಕ ಸಂಖ್ಯೆಯನ್ನು ೧೦ ಸಾವಿರಕ್ಕೆ ತಗ್ಗಿಸಬೇಕೆಂದೂ ತೆಗೆದೊಗೆದ ಸೈನಿಕರನ್ನು ಪೋಲೀಸ ಖಾತೆಯಲ್ಲಿ ಹಾಗೂ ಇನ್ನು ಬೇರೆ ಬಗೆಯಾಗಿ ತೊಡಗಿಸಬೇಕೆಂದೂ ನಿರ್ಣಯಿಸಲಾಗಿತ್ತು. ಆದರೆ ಈ ಕ್ರಮವನ್ನು ಕೂಡಲೇ ಕೈಕೊಳ್ಳಲಾಗುವದಿಲ್ಲವೆಂದು ತಿಳಿದು ಬಂದಿದೆ.

### ರಜಾಕಾರ ಮುಖಂಡರ ಬಂಧನ

ಸಿಕಂದರಾಬಾದದ ಪ್ರಸಿದ್ಧ ರಜಾಕಾರ ಮುಖಂಡನಾದ ಬಾಬು ಖಾನನನ್ನು ತಾ ೧೬ ರಂದು ಬಂಧಿಸಿದ್ದಾರೆ.

ಕಾಶೀಂ ರಜವಿಯ ತಮ್ಮನಾದ ಅಬ್ಬಾಸ ರಜವಿಯನ್ನು ತಾ ೧೯ ರಂದು ಬಂಧಿಸಲಾಗಿದೆ. ಇವನು ಒಬ್ಬ ಪೋಲೀಸ ಅಧಿಕಾರಿಯಾಗಿದ್ದನು.

ರಾಯಚೂರ ಜಿಲ್ಹೆಯಲ್ಲಿ ಈ ೧ ನೇ ತಾ. ವರೆಗೆ ೧ ಸಾವಿರ ರಜಾಕಾರರನ್ನು ಬಂಧಿಸಲಾಗಿದೆಯೆಂದೂ ೪ ವಾಗೀನು ಶಸ್ತ್ರಾಸ್ತ್ರಗಳನ್ನು ಶೋಧಿಸಿ ವಶಪಡಿಸಿಕೊಳ್ಳಲಾಗಿದೆಯೆಂದೂ ತಿಳಿಯುತ್ತದೆ. ಗುಲಬರ್ಗಾ ...ಯ ಚಿಂಚೋಳಿ ... ತಾ ೧೦ ಕ್ಕೆ ರಜಾಕಾರರು ಶ್ರೀ ಅಪ್ಪಾರಾವ ಪಾಟೀಲರೆಂಬ ಕಾಂಗ್ರೆಸ ಕಾರ್ಯಕರ್ತರನ್ನು ಕೊಲೆ ಮಾಡಿದ್ದಾರೆ. ರಜಾಕಾರರು ಈಗ ಸಮ ವಸ್ತ್ರವನ್ನು ತ್ಯಜಿಸಿದ್ದರಿಂದ ಅವರನ್ನು ಹುಡುಕಿ ಬಂಧಿಸುವದು ಕಠಿಣವಾಗಿದೆಯೆಂದು ಪೋಲೀಸರು ಹೇಳುತ್ತಾರೆ

# ಮುಂಬೈ ಹೊಲಸಾಗುವಳಿ ಹೊಸ ಮಸೂದೆ

ಶ್ರೀ ಕಿಶೋರಿಲಾಲ ಮಶ್ರೂವಾಲಾ ಇವರು ಕಳೆದ ಸಲದ ಹರಿಜನದಲ್ಲಿ ಮುಂಬಯಿ ಹೊಲಸಾಗುವಳಿ ಹೊಸ ಮಸೂದೆಯ ಬಗ್ಗೆ ಈ ಬಗೆಯ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಬಹಳ ದೂರಗಾಮಿಯಾದ ಬದಲಾವಣೆಗಳನ್ನೊಳಗೊಂಡ ಹೊಲ ಸಾಗುವಳಿ ಹೊಸ ಕಾಯಿದೆಯನ್ನು ಮುಂಬಯಿ ಸರಕಾರದವರು ಮಾಡಲಿರುವರು. ಅದರಲ್ಲಿಯ ಕೆಲ ಕಲಮುಗಳಿಂದ ಜಮೀನದಾರರು ಬಹಳ ಮಟ್ಟಿಗೆ ಅಸಮಾಧಾನ ಹೊಂದಿದ್ದಾರೆ. ೧೯೩೯ ನೆ ಇಸವಿಯ ಕಾಯದೆಯನ್ನೂ ಅವರು ಚೆನ್ನಾಗಿ ಸ್ವಾಗತಿಸಲಿಲ್ಲ; ತತ್ಪರಿಣಾಮವಾಗಿ ಆ ಕಾಯದೆಯನ್ನು ಜಾರಿಯಲ್ಲಿ ತರುವದರಲ್ಲಿ ಜಮೀನದಾರರು ಮತ್ತು ಸಾಗುವಳಿದಾರರಲ್ಲಿ ಬಹಳ ಖಟ್ಲೆಗಳು ನಡೆದವು. ಭೂಮಿಯನ್ನು ಪ್ರತ್ಯಕ್ಷವಾಗಿ ಉಳುವವರಿಗೆ ಸಂಪೂರ್ಣವಾದ ರಕ್ಷಣೆ ಕೊಡುವದೇ ಹೊಸ ಮಸೂದೆಯ ಉದ್ದೇಶವಾಗಿದೆ.

ಶ್ರೀ ಖುಶಾಲಭಾಯಿ ಮುರಾರಜಿ ಪಟೇಲರು ಬಾರಡೋಲಿಯಲ್ಲಿಯ ಪ್ರಮುಖ ಜಮೀನದಾರರು. ಸರದಾರ ಪಟೇಲರ ಕೈಕೆಳಗೆ ಸೈನಿಕರೆಂದು ಅವರು ಹಲವು ವರ್ಷಗಳ ವರೆಗೆ ಕೆಲಸ ಮಾಡಿದ್ದಾರೆ. ಬಾರಡೋಲಿ ತಾಲೂಕಿನಲ್ಲಿಯ ಬೇರೆ ಬೇರೆ ಆಶ್ರಮಗಳ ಸಂಸ್ಥಾಪನೆಗೆ ಅವರು ಸರದಾರರಿಗೆ ಸಹಾಯವನ್ನು ಮಾಡಿದ್ದುಂಟು. ಜಮೀನದಾರರು ಈವರೆಗೆ ಅನುಭೋಗಿಸುತ್ತಿರಬಹುದಾದ ಯಾವದೇ ಅನ್ಯಾಯದ ಹಕ್ಕು ಬಾಧ್ಯತೆಗಳು ಇರಬೇಕೆಂದು ಅವರು ಬಯಸುವುದಿಲ್ಲ. ಆದರೆ ಈ ಹೊಸ ಕಾಯಿದೆಯಿಂದ ತಮ್ಮಂಥವರಿಗೆ ಕೂಡ ನ್ಯಾಯವಾದ ಹಕ್ಕು ಬಾಧ್ಯತೆಗಳು ಇಲ್ಲದಂತಾಗುವದೆಂಬುದು ಅವರ ದೂರು.

ಸಾಗುವಳಿದಾರರ ಹಿತ ಸಂಬಂಧಗಳನ್ನು ಸಂರಕ್ಷಿಸುವ ಉಪಾಯಗಳನ್ನು ಸರಕಾರವು ಕೈಕೊಳ್ಳುವದು ಉಚಿತವೆ ಆಗಿದೆ. ಆದರೆ ಈ ಬಗೆಯ ಉಪಾಯಗಳನ್ನು ಕೈಕೊಳ್ಳುವಾಗ ಕೆಲವೊಂದು ವಿಶಿಷ್ಟ ಪರಿಸ್ಥಿತಿಯ ಮೂಲಕ ಕೆಲಕಾಲದ ವರೆಗೆ ಸ್ವತಃ ಹೊಲಗಳನ್ನು ಮಾಡದ ಜಮೀನದಾರರ ಭೂಮಿಯನ್ನು ಕಸಿದುಕೊಳ್ಳದಂತೆ ಯೋಗ್ಯ ದಕ್ಷತೆ ವಹಿಸುವದು ಕರ್ತವ್ಯವಾಗಿದೆ.

ತಲೆಮಾರುಗಳಿಂದ ಸ್ವತಃ ಒಕ್ಕಲತನ ಮಾಡುತ್ತಿದ್ದ ಮತ್ತು ಅನುಕೂಲ ಪರಿಸ್ಥಿತಿ ಪ್ರಾಪ್ತವಾದ ಕೂಡಲೆ ಮತ್ತೆ ಅದೇ ಉದ್ಯೋಗವನ್ನು ಕೈಕೊಳ್ಳಲು ಆತುರರಾಗಿರುವ ಅನುವಂಶಿಕ ಒಕ್ಕಲಿಗ ಜಮೀನದಾರರು ಈ ಹೊಸ ಕಾಯಿದೆಯಿಂದ ನಿರ್ನಾಮರಾಗುವರು. ಸದ್ಯದಲ್ಲಿ ಅಪರಿಹಾರ್ಯ ಕಾರಣಗಳ ಮೂಲಕ ಪೂರ್ಣವಾಗಿ ಇಲ್ಲವೆ ಅಂಶತಃ ಜಮೀನದಾರರಾಗಿರುವದೇ ಅವರ ತಪ್ಪು. ಅವರು ಒಕ್ಕಲಿಗರಾಗಿಯೇ ಉಳಿಯಬಯಸುವರು. ಆದರೆ ಅವರಿಗೆ ಈ ಕಾಯಿದೆಯಿಂದ ಹಾಗೆ ಮಾಡಲು ಬರಲಾರದು. ಇದನ್ನು ತಡೆಯಲಿಕ್ಕೆಬೇಕು.

ಈ ಬಗೆಯ ಕೆಲವು ಮಹತ್ವಾಕಾಂಕ್ಷಿ ಒಕ್ಕಲಿಗರು ಕಠಿನ ಪರಿಸ್ಥಿತಿಯಲ್ಲಿ ನಗರಗಳಿಗೋ ಪರದೇಶಗಳಿಗೋ ಪ್ರಯಾಣ ಬೆಳೆಸಿ ಅಲ್ಲಿ ಸಂಪಾದಿಸಿದ ಹಣವನ್ನು ಹಳ್ಳಿಗಳಲ್ಲಿಯ ... ಗಳ... ಅವು ಹೆಚ್ಚು ಫಲಪ್ರದವಾಗುವಂತೆ ಮಾಡಿದರು. ಅವರು ಹೀಗೆ ಮಾಡಿದ್ದು ಅಪರಾಧ, ಅದಕ್ಕಾಗಿ ಅವರನ್ನು ದಂಡಿಸತಕ್ಕದ್ದು ಎಂದು ಪರಿಗಣಿಸತಕ್ಕದ್ದಲ್ಲ. ಕನಿಷ್ಠ ಏನಿಲ್ಲೆಂದರೂ ಅವರಿಗೊಮ್ಮೆ ಅವಕಾಶವನ್ನಾದರೂ ಕೊಡಲಿಕ್ಕೆಬೇಕು. ಪ್ರತ್ಯಕ್ಷ ಒಕ್ಕಲಿಗರಾಗಿ ಒಕ್ಕಲತನ ಸಾಗಿಸಲು ಅವರು ಮರಳುವವರಿದ್ದರೆ ಹಾಗೆ ಮಾಡಲು ಅವರಿಗೆ ಅವಕಾಶ ಕೊಡತಕ್ಕದ್ದು

ಇದಲ್ಲದೆ ಹಿಂದೀ ಸಂಸ್ಥಾನಗಳಲ್ಲಿಯ ಅರಣ್ಯವನ್ನೆಲ್ಲ ಸ್ವಚ್ಛ ಮಾಡಿ ಕೆಲ ಜಮೀನದಾರರು ತಮ್ಮ ಹಣ ಮತ್ತು ಹಲವು ವರ್ಷಗಳ ಪರಿಶ್ರಮವನ್ನು, ಸೂರೆ ಮಾಡಿ ಅವನ್ನು ಭೂಮಿಗಳನ್ನು, ಬಹಳ ಬೆಳೆ ಬರುವ ಭೂಮಿಗಳನ್ನಾಗಿ ಪರಿವರ್ತಿಸಿದ್ದುಂಟು. ಇಂಥ ಕೆಲ ಭೂಮಿಗಳನ್ನು ಅವರೀಗ ಪಾಲುಗಾರಿಕೆಯ ಕರಾರಿನ ಮೇಲೆ ಕೆಲ ಸಾಗುವಳಿದಾರರಿಗೆ ಕೊಟ್ಟದ್ದುಂಟು. ಈ ಸಂಸ್ಥಾನಗಳೆಲ್ಲ ಈಗ ಪ್ರಾಂತಗಳಲ್ಲಿ ವಿಲೀನವಾಗಿವೆಯೆಂದು ಈ ಹೊಸ ಕಾಯಿದೆಯನ್ನು ಅಲ್ಲಿಯೂ ಕೂಡಲೆ ಜಾರಿಯಲ್ಲಿ ತಂದರೆ, ಅವರ ಈ ಪರಿಶ್ರಮ ಮತ್ತು ಸಾಹಸವೆಲ್ಲ ನಿರರ್ಥಕವಾಗಿ ಅವರು ಆ ಫಲಗಳಿಗೆ ಎರವಾಗಬೇಕಾಗುವದು. ಇದೊಂದು ಬಗೆಯ ದುಃಖಾಂತ ಘಟನೆಯಾಗುವದಿಷ್ಟೇ ಅಲ್ಲ, ಅವರ ಬುದ್ಧಿವಂತಿಕೆಯ ಸಾಹಸಗಳಿಗೆಲ್ಲ ನೀರೆರಚಿದಂತಾಗುವದು.

ನ್ಯಾಯಾಲಯಗಳಿಗೆ ಹೋಗುವ ಹಕ್ಕನ್ನೂ ಈ ಕಾಯದೆ ಕಸಿದುಕೊಳ್ಳುವದಲ್ಲದೆ ಕಾರ್ಯನಿರ್ವಾಹಕ ಅಧಿಕಾರಿಗಳ ಕೈಯಲ್ಲಿಯ ಕೆಲಸ ಮಾಡುವ ಸ್ಪೆಶಲ್ ಟ್ರಿಬ್ಯುನಲ್ಲದವರ ನಿರ್ಣಯವೇ ಕೊನೆಯದೆಂದು ಈ ಕಾಯಿದೆ ಸಾರುತ್ತದೆ.

ಶ್ರೀ ಖುಶಾಲಭಾಯಿ ಪಟೇಲರ ಪ್ರತಿನಿಧಿತ್ವದ ಸಾಗುವಳಿದಾರ ವರ್ಗದವರ ಮುಖ್ಯ ಬೇಡಿಕೆಗಳು ಇಂತಿವೆ.

೧) ಈ ಕಾಯಿದೆಯನ್ನು ಜಾರಿಯಲ್ಲಿ ತರುವಲ್ಲಿ ಅನವಶ್ಯಕ ಅವಸರವನ್ನು ಮಾಡತಕ್ಕದ್ದಲ್ಲ ಮತ್ತು ಈ ಕಾಯದೆಯಿಂದ ಹಾನಿಗೆ ಗುರಿಯಾದವರಿಗೆ ತಮ್ಮ ಅಭಿಪ್ರಾಯವನ್ನು ಹೇಳಲಿಕ್ಕೆ ಸಾಕಷ್ಟು ಅವಕಾಶವನ್ನು ಕಲ್ಪಿಸಿ ಕೊಡತಕ್ಕದ್ದು.

೨) ಒಕ್ಕಲಿಗ ಎಂಬುವದರ ವ್ಯಾಖ್ಯೆಯನ್ನು, ಅನುವಂಶಿಕ ಒಕ್ಕಲಿಗನಾಗಿದ್ದು ಸ್ವತಃ ತಾನಾಗಲಿ ಇಲ್ಲವೆ ಕೂಲಿಗಾರರ ಸಹಾಯದಿಂದಾಗಲಿ ಅನೇಕ ವರ್ಷಗಳಿಂದ ಒಕ್ಕಲತನ ಮಾಡುತ್ತ ಬಂದವನು ಎಂದು ಮಾಡತಕ್ಕದ್ದು. ಈಗ ಅವನು ಜಮೀನದಾರನಾಗಿದ್ದರೆ, ಅವನ ಭೂಮಿಗಳನ್ನು ಸಾಗುವಳಿದಾರರಿಗೆ ಕೊಡುವ ಮೊದಲು ಅವನು ಸ್ವತಃ ಮತ್ತೆ ಸಾಗುವಳಿದಾರನಾಗಬಯಸಿದರೆ ಅವನಿಗೆ ಆ ಬಗೆಯ ಅವಕಾಶವನ್ನು ಕೊಡಬೇಕು.

೩) ಜಮೀನದಾರನ ವಶದಲ್ಲಿರತಕ್ಕ ಹೊಲಗಳ ಹೆಚ್ಚಿನ ಪರಿಮಿತಿಯನ್ನು ೫೦ ಎಕರೆಯಿಂದ ೧೦೦ ಎಕರೆಗೆ ಏರಿಸತಕ್ಕದ್ದು.

೪) ಹಿಂದು ಕಾಯಿದೆಯಲ್ಲಿಯಂತೆ ಪಾಲುಗಳನ್ನು ಮನ್ನಿಸಬೇಕಲ್ಲದೆ ಈ ಕಾಯಿದೆಯಲ್ಲಿಯ ೩೨ ನೆಯ ಕಲಮಿನಲ್ಲಿ ಸೂಚಿಸಿದಂತೆ ಅಲ್ಲ.

೫) ಬೆಳೆಯಲ್ಲಿಯ ಜಮೀನದಾರನ ಪಾಲಿನ ಬೆಲೆಯನ್ನು ಹಣರೂಪದಲ್ಲಿ ಗೊತ್ತುಪಡಿಸತಕ್ಕದ್ದಲ್ಲ.

೬) ವಿಶಿಷ್ಟ ಪರಿಸ್ಥಿತಿಯಲ್ಲಿ ಹೊಲವನ್ನು ಸಾಗುಮಾಡುವ ಹಕ್ಕನ್ನು ಮನ್ನಿಸತಕ್ಕದ್ದು.

೭) ... ಹಕ್ಕನ್ನು ಕಸಿದುಕೊಳ್ಳತಕ್ಕದ್ದಲ್ಲ.

ಇವಲ್ಲದೆ ಕಡಮೆ ಮಹತ್ವದ ಇನ್ನು ಹಲವು ಬೇಡಿಕೆಗಳಿರುವವು.

ಮೇಲಿನ ಕೆಲವು ಬೇಡಿಕೆಗಳು ನ್ಯಾಯ್ಯವೆಂದು ತೋರುತ್ತವೆ. ಇನ್ನು ಹಲವುಗಳ ಬಗ್ಗೆ ಹೆಚ್ಚಿಗೆ ವಿಚಾರ ಮಾಡತಕ್ಕದ್ದು ಮತ್ತು ಕೆಲವು ವಿವಾದಾತ್ಮಕವಾಗಿ ತೋರುವವು. ಇವುಗಳ ವಿವರವಾದ ವಿಮರ್ಶೆ ಮಾಡಲು ಈ ಸಮಸ್ಯೆಗಳ ಸಾಕಷ್ಟು ಜ್ಞಾನ ಇಲ್ಲವೆ ಪರಿಚಯ ನನಗೆ ಇರುವದಿಲ್ಲ. ಈ ತಕರಾರುಗಳ ಬಗ್ಗೆ ಶಾಸನ ಸಭಾ ಸದಸ್ಯರು ಯೋಗ್ಯ ಮತು ನಿರ್ವಿಕಾರ ಮನಸ್ಸಿನಿಂದ ವಿಚಾರ ಮಾಡುವರೆಂದು ನಾನು ಆಶಿಸುತ್ತೇನೆ.

ಹಳ್ಳಿಯ ಇಡೀ ಅರ್ಥಪದ್ಧತಿಯ ದೃಷ್ಟಿಯಿಂದ ಈ ಸಮಸ್ಯೆಯ ವಿಚಾರ ಮಾಡಲು ಅವಕಾಶ ದೊರೆಯುವಂತೆ. ನಾನು ಹಳ್ಳಿಯ ಅರ್ಥಪದ್ಧತಿಯ ಸ್ಥೂಲ ತತ್ತ್ವಗಳನ್ನು ಬೇರೆ ಕಡೆ ವಿವೇಚಿಸಿದ್ದೇನೆ. ಈ ತತ್ತ್ವಗಳಿಗನುಗುಣವಾಗಿ ಮಾಡಲ್ಪಟ್ಟ ಸುಧಾರಣೆಗಳಿಂದ ಕೆಲ ವ್ಯಕ್ತಿಗಳಿಗೆ ಇಲ್ಲವೆ ವರ್ಗಕ್ಕೆ ಹಾನಿಯಾದರೂ ಅವು ನ್ಯಾಯ್ಯವೆಂದು ಪರಿಗಣಿಸಲ್ಪಡಬೇಕೆಂದು ನನ್ನ ವಿಶ್ವಾಸ. ಸದ್ಯದಲ್ಲಿ ಈ ಹಾನಿ ಅಪರಿಹಾರ್ಯ, ಆದರೆ ಮುಂದೆ ಈಗ ಹಾನಿಯಾದವರನ್ನೊಳಗೊಂಡು ಎಲ್ಲ ಜನರ ಸರ್ವೋದಯವನ್ನು ಅದು ಬೆಳೆಸುವದು.

ಸೈನ್ಯಪಡೆಯವರು ಅಗ್ನಿಶಾಮಕ ಯಂತ್ರಗಳ ಸಹಾಯದಿಂದ ಬಾವಿಗಳಲ್ಲಿಯ ನೀರನ್ನು ತೆಗೆದು ಶಸ್ತ್ರಾಸ್ತ್ರಗಳನ್ನು ಶೋಧಿಸುತ್ತಿರುವರು. ರಜಾಕಾರರ ಮೋಸಗಾರಿಕೆಯ ಪರಮಾವಧಿಯೆಂದರೆ ಎಷ್ಟೋ ಶಸ್ತ್ರಾಸ್ತ್ರಗಳನ್ನು ಹುಗಿದು ಮೇಲೆ ಗೋರಿಯನ್ನು ರಚಿಸಿದ್ದಾರೆ. ಅನೇಕ ಕಡೆ ಈ ಬಗೆಯ ಮೋಸಗಾರಿಕೆಯು ಬೈಲಿಗೆ ಬಂದಿದ್ದು ಇತ್ತೀಚಿನ ಗೋರಿಗಳನ್ನು ಅಗಿದು ಶೋಧಿಸಿ ಅಪಾರ ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸುವ ಕಾರ್ಯವೂ ನಡೆದಿದೆ. ಮದ್ರಾಸದಲ್ಲಿ ೪ ಸಾವಿರ ರಜಾಕಾರ ಕೈದಿಗಳಿದ್ದು ಅವರನ್ನು ಹೈದರಾಬಾದ ಮಿಲಿಟರಿ ಸರಕಾರದೆದುರು ವಿಚಾರಣೆಗೆ ಕಳಿಸಲಾಗುವದೆಂದು ತಿಳಿದಿದೆ.

# ಹಳ್ಳಿಯ ಅರ್ಥಪದ್ಧತಿಯಲ್ಲಿ ಸರ್ವೋದಯ

(ಶ್ರೀ ಕಿಶೋರಲಾಲ ಮಶ್ರೂವಾಲಾ ಇವರು ಕಳೆದ ಸಲದ ಹರಿಜನದಲ್ಲಿ ಹಳ್ಳಿಯ ಅರ್ಥಪದ್ಧತಿಯಲ್ಲಿ ಸರ್ವೋದಯ ಎಂದು ಬರೆದ ಬರಹದ ಅನುವಾದವಿದು.)

ನಾವು ಜೀವನವನ್ನು ಇಡಿಯಾಗಿ ಅದರ ಸರ್ವ ಮುಖಗಳಲ್ಲೂ ಕಣ್ಣಿಟ್ಟು ನೋಡಬೇಕು. ಆಗ ಅಲ್ಲಿ ಬೆಸೆಯಲಾರದ ವಿರುದ್ಧ ವಿಭಕ್ತತೆ ಮತ್ತು ಒಕ್ಕಲುತನ, ಉದ್ಯಮ, ಉದ್ಯೋಗಗಳಲ್ಲಿ ತಪ್ಪಲವಾದ ಪರಸ್ಪರ ಹಿತಸಂಘರ್ಷ ಇವು ಎಂದೂ ಇರಲಾರವು. ಒಂದು ಉದ್ಯೋಗ ಹಿಡಿದವನಿಗೆ ಇನ್ನೊಂದರಲ್ಲಿ ಭಾಗವಹಿಸಲು ಸಾಧ್ಯವಾಗಬೇಕು. ಇಲ್ಲವೆ ಅನ್ಯೋದ್ಯೋಗಗಳ ಸಂಪಾದನೆಯಲ್ಲಿ ಪಾಲುಗಾರನಾಗಲು ಬರಬೇಕು. ಈ ದಾರಿಯಲ್ಲಿ ಸಾಗುವ ಅಭಿವೃದ್ಧಿಯನ್ನು ಗುರಿಯಾಗಿ ತೆಗೆದುಕೊಳ್ಳಬೇಕು.

ಆಳು ಇಲ್ಲವೆ ಗುಲಾಮ ಮತ್ತು ಯಜಮಾನ ಎಂದು, ಜಮೀನುದಾರ ಒಕ್ಕಲು ಎಂಬುದಾಗಿ ಗದ್ದೆಯನ್ನು ಸ್ವತಃ ಸಾಗು ಮಾಡುವವ ಮತ್ತು ಒಡೆಯ. ಹೀಗೆ ಇಬ್ಬರಿರುವುದರಿಂದ ಉಂಟಾಗುವ ನಾನಾ ಬಗೆಯ ಅನ್ಯಾಯಗಳಿಗೆ ಇಡಿಯಾದ ನೋಟದ ಅಭಾವವೇ ಕಾರಣ.

ತನ್ನ ಶ್ರಮದಿಂದ ಒಕ್ಕಲು ಬೆಳೆವ ಬೆಳೆಯಲ್ಲಿ ಒಡೆಯನಿಗಿರುವ ಪಾಲು ಸ್ವತಃಸಿದ್ಧವಾದುದೆಂದು ಬಹಳ ಕಾಲದಿಂದ ನಂಬಿಕೊಂಡು ಬರಲಾಗಿದೆ; ಆದರೆ ಗದ್ದೆಕೆಲಸದಿಂದ ಒಕ್ಕಲು ತನ್ನನ್ನು ಬಿಡುಗಡೆ ಮಾಡ್ದರಿಂದ ತಾನು ಹಿಡಿಯಲು ಸಾಧ್ಯವಾದ ಇತರ ಉದ್ಯೋಗಗಳ ಮೂಲಕ ಜಮೀನುದಾರನು ಸಂಪಾದಿಸಬಹುದಾದ ಗಳಿಕೆಯಲ್ಲಿ ಒಕ್ಕಲಿಗೆ ಯಾವ ಪಾಲೂ ಇಲ್ಲ.

ಪರಸ್ಥಳದಲ್ಲಿ ಕಾಲು ಮೇಲೆ ಕಾಲು ಹಾಕಿ ಕುಳಿತುಕೊಳ್ಳುವ ಜಮೀನುದಾರನ ಜಮೀನುದಾರಿಕೆಯನ್ನು ತೆಗೆದು ಹಾಕುವುದರ ಮೂಲಕ ಈ ಅನ್ಯಾಯವನ್ನು ದೂರಮಾಡಬೇಕೆಂದು ಪ್ರಯತ್ನಿಸಲಾಗುತ್ತಿದೆ. 'ನೀನೇ ಸ್ವತಃ ಶುದ್ಧ ಒಕ್ಕಲಾಗಿ ಗದ್ದೆ ಮಾಡಬೇಕು. ಇಲ್ಲವೆ ಆ ಗದ್ದೆಯಲ್ಲಿ ಯಾವ ಆಸಕ್ತಿಯನ್ನೂ ವಹಿಸಬಾರದು' ಎಂದು ಅವನನ್ನು ಕೇಳಲಾಗಿದೆ.

ರೋಗ ನಿವಾರಣೆಗೆ ಇದು ಸರಿಯಾದ ಮಾರ್ಗವೆಂದು ತೋರುವುದಿಲ್ಲ. ಯೋಗ್ಯವಾದ ರೀತಿಯ ಹಿಂದೀ ಗ್ರಾಮೋದ್ಧಾರಕ್ಕೆ ಹಳ್ಳಿಗನು ಕೇವಲ ಒಕ್ಕಲು, ದನಗಾಹಿ ಅಥವಾ ವ್ಯಾಪಾರಿ ಆಗಿದ್ದರೆ ಸಾಲದೆಂಬುದು ಮುಖ್ಯವಾದುದು. ಸಾಮಾನ್ಯವಾಗಿ ಈ ಯಾವ ಉದ್ಯೋಗಗಳೂ ವರ್ಷದ ಎಲ್ಲ ಕಾಲದಲ್ಲೂ ಅಜಸ್ರವಾಗಿ ಮಾಡತಕ್ಕವಲ್ಲ; ಅವನಿಗವು ಯಥೇಚ್ಛ ಕೆಲಸ ಮಾಡುವದಿಲ್ಲ. ಆದರಲ್ಲಿ ಆಸಕ್ತರಾದವರಿಗೆ ಒಂದು ವೇಳೆ ಅವುಗಳಲ್ಲಿ ಒಂದೊಂದು ಉದ್ಯೋಗವೂ ಸಂಪೂರ್ಣ ಕೆಲಸ ಕೊಡುವಂತೆ ಸುಧಾರಿಸಿದರೂ ಅವರು ತಮ್ಮ ಮುಖ್ಯೋದ್ಯೋಗದ ಜೊತೆಗೆ ಯಾವುದಾದರೊಂದು ಕೈಗಾರಿಕೆಯನ್ನೂ ಹಿಡಿಯಬೇಕು. ಕೇವಲ ಒಕ್ಕಲುತನವನ್ನು ಮಾಡುವವನು ಎಷ್ಟೋ ವೇಳೆ ಬೌದ್ಧಿಕ ನೆಲೆಯಲ್ಲಿ ಪೂರ್ಣವಾಗಿ ಅಭಿವೃದ್ಧಿ ಹೊಂದುವುದಿಲ್ಲ. ಬರಿಯ ಅಂಗಡಿಕಾರ ಇಲ್ಲವೆ ಕಸಬುದಾರನು ದೈಹಿಕ ದೌರ್ಬಲ್ಯ ಮತ್ತು ನೈತಿಕ ಹೇಡಿತನದತ್ತ ಒಲೆಯುವನು.

ಹಳ್ಳಿಯ ಅವಶ್ಯಕತೆಗಳು ಕಸಬುಗಾರರ ವರ್ಗದ ಉದಯಕ್ಕೆ ಕಾರಣವಾಯಿತು. ಸ್ಥಳದಲ್ಲೇ ಅಂಥವರನ್ನು ತಯಾರು ಮಾಡಲಾಗದಲ್ಲಿ ಪರಸ್ಥಳಗಳಿಂದ ಅವರನ್ನು ಆಮಂತ್ರಿಸಲಾಯಿತು. ಅವೇ ಅವಶ್ಯಕತೆಗಳು ಕೇವಲ ಒಕ್ಕಲಾಗಿದ್ದವನನ್ನು ವ್ಯಾಪಾರಿಯ ನಿಯಂತ್ರಣದೊಳಗೆ ತಂದವು. ಮಿಕ್ಕವರಿಗಿಂತ ಹೆಚ್ಚು ಬುದ್ಧಿ ಮತ್ತು ಯುಕ್ತಿ ಉಳ್ಳ ಒಕ್ಕಲಿಗ ವರ್ಗದವರು ಆ ಉದ್ಯೋಗವನ್ನು ಕೈಕೊಂಡರು, ಅವರಿಗೆ 'ನಿಮ್ಮ ಗದ್ದೆಗಳನ್ನು ಬಿಡಿರಿ' ಎಂದು ಯಾರೂ ಹೇಳಲಿಲ್ಲ. ಮೊದಲು ಅವನ್ನು ಕೂಲಿಗರರ ಮೂಲಕ ಮತ್ತು ಅನಂತರ ಗೇಣಿದಾರರ ಮೂಲಕ ಸಾಗು ಮಾಡಲಾಯಿತು.

ಹೀಗೆ ಶ್ರಮವಿಭಜನೆ ಎಂಬುದು ಬಂದಿತು. ಆದರೆ ಸಂಪಾದನೆಯ ವಿಭಜನೆಯಲ್ಲಿ ವ್ಯಾಪಾರಿಯು ಗದ್ದೆಯ ಫಸಲಿನಲ್ಲೂ ಭಾಗ ಕೇಳಿದನು ಮತ್ತು ಕಸಬುಗಾರನ ಶ್ರಮದಲ್ಲೂ ಒಂದು ಪಾಲು ಕೇಳಿದನು. ಆದರೆ ಅದೇ ಕಾಲದಲ್ಲಿ ಅವನು ತನ್ನ ವ್ಯಾಪಾರದ ಗಳಿಕೆಯಲ್ಲಿ ಯಾರಿಗೂ ಪಾಲು ಕೊಡಲು ಒಪ್ಪಲಿಲ್ಲ. ಹಾಗೇ ಜಮೀನುದಾರನು ಕೂಲಿಗಾರನು ಬೆವರು ಹರಿಸಿ ಪಡೆದ ಫಸಲಿನಲ್ಲಿ ಪಾಲು ಕೇಳಲು ಬಂದನು ಮತ್ತು ತನ್ನ ಇತರ ಗದ್ದೆಗಳ ಅಥವಾ ಉದ್ಯೋಗಗಳ ಗಳಿಕೆಯಲ್ಲಿ ಪಾಲು ಕೊಡದೆ ಕಸಬುಗಾರನ ಕೌಶಲ್ಯವನ್ನು ದುರುಪಯೋಗ ಮಾಡಿಕೊಂಡು ಅವನಿಗೆ ಉಸಿರು ಹಿಡಿದುಕೊಂಡಿರಲು ಮಾತ್ರ ಸಾಕಾಗುವಷ್ಟು ಪ್ರತಿಫಲವನ್ನು ಕೊಡುತ್ತ ಬಂದನು. ಈ ಪ್ರಕಾರ ಎಲ್ಲರಿಗಿಂತ ಹೆಚ್ಚು ಕಷ್ಟ ಕೃಷಿ ಮಾಡಿಯೂ ಎಲ್ಲರಿಗಿಂತ ಅಲ್ಪ ಪ್ರತಿಫಲ ಪಡೆವವರೆಂದರೆ ಗದ್ದೆಯಿಲ್ಲದ ಕೂಲಿಗಾರರು ಮತ್ತು ಕಸಬುಗಾರರು.

ಈಗ ತರಬೇಕೆಂದಿರುವ ಸುಧಾರಣೆಗಳು ಜಮೀನುದಾರ ಮತ್ತು "ಮಧ್ಯಸ್ಥ" (ಅಂದರೆ ಅಂಗಡಿಕಾರ ಇಲ್ಲವೆ ದಲಾಲ)ರನ್ನು ಕಿತ್ತೊಗೆವ ಗುರಿಯುಳ್ಳವಾಗಿವೆ. ಅದರಿಂದ ಕಸಬುಗಾರ ಮತ್ತು ಗದ್ದೆ ಕೂಲಿಗಾರರನ್ನು ಸ್ವತಂತ್ರ ವರ್ಗದವರನ್ನಾಗಿ ಮಾಡಿ ಅವರಿಗೆ ತಮ್ಮ ಶ್ರಮದಲ್ಲಿ ಯೋಗ್ಯ ಪಾಲು ತೆಗೆದುಕೊಳ್ಳಲು ಅವಕಾಶ ಕಲ್ಪಿಸಿಕೊಡಲು ಸಾಧ್ಯವಾಗುವುದು.

ಬೃಹತ್ಪ್ರಮಾಣದ ಉದ್ಯಮಗಳನ್ನು ನಿಲ್ಲಿಸಲು ಯಾರಿಗೂ ಧೈರ್ಯವಿಲ್ಲದಿರುವುದರಿಂದ ಉದ್ಯಮಿಯು ರಾಷ್ಟ್ರೀಯ ಅರ್ಥಪದ್ಧತಿಯಲ್ಲಿ ಒಂದು ಗೌರವದ ಸ್ಥಾನವನ್ನು ಉಳಿಸಿಕೊಳ್ಳುವನು.

ಅವಿಭಕ್ತ ಹಿಂದು ಕುಟುಂಬ ಪದ್ಧತಿಯು ರಕ್ತ ಸಂಬಂಧದ ತಳಹದಿಯಲ್ಲಿ ಕಟ್ಟಲ್ಪಟ್ಟದೆ. ಒಂದು ಕುಟುಂಬದಲ್ಲಿ ೨೦೦—೩೫೦ ಸದಸ್ಯರಿದ್ದ ಕಾಲವೂ ಒಂದಿತ್ತು. ಹೊಲಗಳನ್ನು ಸಾಗು ಮಾಡುವದು, ದನಕರಗಳನ್ನು ಜೋಪಾನ ಮಾಡುವದು, ಬೇರೆ ಬೇರೆ ಸಾಮಾನುಗಳನ್ನು ಸಿದ್ಧಪಡಿಸುವದು, ಉತ್ಪಾದನೆಯನ್ನು ಪೇಟೆಗೊಯ್ಯುವದು ಮೊದಲಾದ ಕೆಲಸಗಳನ್ನು ಕುಟುಂಬದಲ್ಲಿಯ ಬೇರೆ ಬೇರೆ ಜನರು ಹಂಚಿಕೊಂಡು ಮಾಡಲು ಇದರಿಂದ ಅನುಕೂಲವಾಗುತಿತ್ತು; ಪರಿಣಾಮವಾಗಿ ಉತ್ಪಾದನೆಯನ್ನೆಲ್ಲ ಪ್ರತಿಯೊಬ್ಬನು ಅನುಭೋಗಿಸುತಿದ್ದನು, ಅದರೀಗ ಆ ಪದ್ಧತಿ ಮಾಯವಾಗಿದೆ, ಅದನ್ನು ಅದೇ ಸ್ವರೂಪದಲ್ಲಿ ಮತ್ತೆ ಜಾರಿಯಲ್ಲಿ ತರುವದು ಶಕ್ಯವಿಲ್ಲ. ಆದರೆ ಎಲ್ಲರ ಗಳಿಕೆಯಲ್ಲಿಯೂ ಪ್ರತಿಯೊಬ್ಬನ ಪಾಲು ಇರತಕ್ಕದ್ದೆಂಬ ಅದರಲ್ಲಿಯ ತತ್ತ್ವವು ಆ ಪದ್ಧತಿಯಲ್ಲಿಯ ಮಹತ್ವದ ಅಂಗವಲ್ಲವು. ವಿವಿಧೋದ್ದೇಶಕ ಸಹಕಾರಿ ಸಂಘಗಳ ಮುಖಾಂತರ ಮಾತ್ರ ಅದರ ಪ್ರಯೋಜನವನ್ನು ಈಗ ಪಡೆಯಬಹುದಾಗಿದೆ. ಇಂಥ ಸಂಘಗಳನ್ನು ಅಭಿವೃದ್ಧಿಪಡಿಸುವ ಉದ್ದೇಶವನ್ನಿಟ್ಟುಕೊಂಡೇ ಎಲ್ಲ ಕಾಯದೆ ಮತ್ತು ಸುಧಾರಣೆಗಳಾಗತಕ್ಕದ್ದು.

ಹೊಲಸಾಗುವಳಿ ಕಾಯಿದೆಯ ಉದ್ದೇಶವೂ ಇದೇ ಬಗೆಯದಾಗಿರಬೇಕು. ಜಮೀನುದಾರನೆನ್ನಿಸಿಕೊಳ್ಳುವವನು, ಒಕ್ಕಲಿಗನು, ಹೊಲಸಾಗುವಳಿದಾರನು ಹೊಲಗಳಲ್ಲಿ ಕೆಲಸ ಮಾಡುವ ಕೂಲಿಗಾರನು, ಹಳ್ಳಿಯ ಕಸಬುಗಾರನು, ಅಂಗಡಿಕಾರನು ಮತ್ತು ಹಣ ಸಂಪಾದನೆಗಾಗಿ ಕೆಲ ಕಾಲ ಹೊರಗೆ ಹೋದ ಗುಳೇಗಾರನು ಇವರೆಲ್ಲರೂ ಒಂದೇ ಸಂಘದಲ್ಲಿ ಅತ್ಯಂತ ನಿಕಟವಾಗಿ ಹೆಣೆಯಲ್ಪಡಬೇಕು. ಪ್ರತಿಯೊಬ್ಬನು ಉಳಿದವರೆಲ್ಲರ ಗಳಿಕೆಯಲ್ಲಿ ಪಾಲು ಪಡೆಯತಕ್ಕದ್ದು. ಮತ್ತು ಯಾರೂ ನಿರುದ್ಯೋಗಿಗಳಾಗಿ ಉಳಿಯತಕ್ಕದ್ದಲ್ಲ. ಪ್ರತಿಯೊಬ್ಬನಿಗೂ ಜೀವನವೇತನವಂತೂ ಸಿಕ್ಕಲಿಕ್ಕೆಬೇಕು. ಇಂಥ ವಿವಿಧೋದ್ದೇಶ ಸಂಘಗಳ ತಳಹದಿಯಲ್ಲಿ ರಚಿತವಾದ ಆರ್ಥಿಕ ಜೀವನವನ್ನು ಸಾಗಿಸಲು ಜನರಿಗೆ ಪ್ರೇರೇಪಿಸಬೇಕಲ್ಲದೆ ಆ ಬಗೆಯ ಶಿಕ್ಷಣವನ್ನೂ ಅವರಿಗೆ ಕೊಡತಕ್ಕದ್ದು.

ಜಮೀನುದಾರನು ಸಾಗುವಳಿದಾರ ಮತ್ತು ಕೂಲಿಕಾರರಿಗೆ ತನ್ನ ಇತರ ಗಳಿಕೆಯಲ್ಲಿ ಪಾಲು ಕೊಡಲು ಸಿದ್ಧನಿದ್ದರೆ ಹೊಲದ ಒಡೆತನವೆಲ್ಲ ಅವನಿಗೇ ಸೇರಿದ್ದರೆ ಹಾನಿಯೇನೂ ಇಲ್ಲ.

ವ್ಯಾಪಾರಿಯೊಬ್ಬನು ತನ್ನ ಗಳಿಕೆಯನ್ನು ಹೊಲದಲ್ಲಿ ಹಾಕಿ ಕೂಲಿಕಾರರಿಂದಾಗಲಿ ಇಲ್ಲವೆ ರೈತರಿಂದಾಗಲಿ ತನ್ನ ಹೊಲಗಳನ್ನು ಸಾಗು ಮಾಡಿಸಿ ಅದರ ಉತ್ಪಾದನೆಗಳಲ್ಲಿ ಪಾಲು ತೆಗೆದುಕೊಳ್ಳುವುದಕ್ಕೆ ಯಾವದೇ ಬಗೆಯ ಆಕ್ಷೇಪವಿಲ್ಲ. ಆದರೆ ಹೀಗೆ ಮಾಡುವದಿದ್ದಲ್ಲಿ ಅವನು ತನ್ನ ಉಳಿದ ಉತ್ಪಾದನೆಯಲ್ಲಿಯೂ ಸಮಾನವಾದ ಪಾಲು ಕೊಡಲು ಸಿದ್ಧನಿರಲಿಕ್ಕೆಬೇಕು.

ಅವಿಭಕ್ತ ಹಿಂದು ಕುಟುಂಬದಲ್ಲಿಯ ಸಾಹಸಿ ತರುಣನೊಬ್ಬನು ಹೊರಗೆ ಹೋಗಿ ಹಣವನ್ನು ಸಂಪಾದಿಸುತ್ತಾನೆ. ಅವನು ಮನೆಯಲ್ಲಿಲ್ಲದಾಗ ಉಚಿತವಾದ ಸಂಪಾದನೆಯಲ್ಲಿ ಅವನಿಗೆ ಪಾಲು ಸಿಕ್ಕುತ್ತಿರುವಂತೆ ಅವನು ಗಳಿಸಿದ ಹಣದಲ್ಲಿಯೂ ಕುಟುಂಬದಲ್ಲಿಯ ಇತರ ಸದಸ್ಯರಿಗೆ ಪಾಲು ದೊರೆಯುವಂತೆ ಅವನು ನೋಡಿಕೊಳ್ಳತಕ್ಕದ್ದು. ಕುಟುಂಬದ ಪರಿಮಿತಿಯನ್ನು ಇನ್ನಷ್ಟು ವ್ಯಾಪಕಗೊಳಿಸಿ ಸಾಗುವಳಿದಾರನು ಮತ್ತು ಕೂಲಿಗಾರನು ಇಷ್ಟೇ ಅಲ್ಲ ಇಡೀ ಹಳ್ಳಿಯನ್ನು ಕೂಡ ಅದರಲ್ಲಿ ಏಕೆ ಸಮಾವೇಶ ಮಾಡಬಾರದು? ಹಾಗಾದಲ್ಲಿ ಹೊಟ್ಟೆಕಿಚ್ಚಿಗೆ ಅವಕಾಶವೇ ಉಳಿಯಲಾರದು. ತದ್ವಿರುದ್ಧವಾಗಿ ಅವನಿಗೆ ಹೊರಗೆ ಹೋಗಿ ಸಾಹಸ ಮಾಡಿದ್ದಕ್ಕಾಗಿ ಸಹಾಯ ಮತ್ತು ಪ್ರೋತ್ಸಾಹನೆಯೂ ದೊರೆಯುವದು. ಸಹಕಾರಿ ತತ್ವದಿಂದಲೆ ಇದು ಶಕ್ಯವಿದೆ. ಇದರಿಂದ ಪರಸ್ಥಳಗಳಲ್ಲಿರುವ ಜಮೀನುದಾರರ ಅನಾರ್ಜಿತ ಉತ್ಕರ್ಷ, ಕೋಪಣೆ ಮೊದಲಾದ ಶಬ್ದಗಳೆಲ್ಲ ಮಾಯವಾಗುವವು.

೫೦ ಎಕರೆಗಳಿಗಿಂತ ೧೦೨ ರಿಂದ ೨೦೦ ಎಕರೆಯ ವರೆಗೆ ಹೊಲಗಳನ್ನು ಸಾಗುಮಾಡುವದು ನಿಶ್ಚಯವಾಗಿ ಲಾಭಕರವಾದುದು; ಅದರಂತೆ ದನಕರುಗಳ ಸಣ್ಣ ಹಿಂಡನ್ನು ಸಾಕುವದಕ್ಕಿಂತ ದೊಡ್ಡ ಹಿಂಡನ್ನು ಸಾಕುವದು ಹೆಚ್ಚು ಪ್ರಯೋಜನಕಾರಿಯಾಗಿರುವದಲ್ಲದೆ ಸಣ್ಣ ಹಿಂಡಿಗಿಂತ ಹೆಚ್ಚು ಹಣವನ್ನು ಉತ್ಪಾದಿಸುವಂತಹದು: ಆದರೆ ಇದೆಲ್ಲ ಸಹಕಾರಿ ಪದ್ಧತಿಯಲ್ಲಿಯೆ ಸಾಗಬೇಕು.

ಇಂಥ ಹೊಲ ಸಾಗುವಳಿ ಕಾಯಿದೆಯು ಈ ಬಗೆಯ ಸಹಕಾರ ಸಂಘಗಳ ಅಭಿವೃದ್ಧಿಗೆ ಸಹಾಯಕವಾಗದಿದ್ದರೆ ಯೋಗ್ಯ ರೀತಿಯಲ್ಲಿ ಆ ಲೋಪದೋಷಗಳನ್ನು ಹೋಗಲಾಡಿಸುವ ಉಪಾಯಗಳನ್ನು ಯೋಜಿಸಬೇಕು. ಈ ಮೊದಲು ಜಮೀನುದಾರರಿದ್ದವರಿಗೆ ತಮ್ಮ ಹೊಲಗಳಲ್ಲಿ ಹೆಚ್ಚು ಲಕ್ಷ್ಯ ಹಾಕುವಂತೆ ಅವರನ್ನು ಬರಮಾಡಿಕೊಳ್ಳುವ ಮತ್ತು ತಿರುಗಿ ಹಳ್ಳಿಗೆ ಬಂದು ಸ್ವತಃ ಒಕ್ಕಲುತನ ಸಾಗಿಸುವ ಮತ್ತು ಒಕ್ಕಲತನದಲ್ಲಿ ಸುಧಾರಣೆ ಮಾಡುವಂತೆ ಅವರನ್ನು ಪ್ರೋತ್ಸಾಹಿಸಲು ಕಾಯಿದೆಯಲ್ಲಿ ಮಾರ್ಪಾಡು ಆಗಬೇಕು. ಸಾಗುವಳಿದಾರನು, ಕಸಬುಗಾರನು ಮತ್ತು ಕೂಲಿಕಾರನು ಎಲ್ಲರಿಗೂ ಸಂಯುಕ್ತ ಗಳಿಕೆಯಲ್ಲಿ ಪಾಲು ಪಡೆಯುವಂತೆ ಹಳ್ಳಿಗಳಲ್ಲಿ ಉದ್ಯೋಗ ಧಂಧೆಗಳ ಅಭಿವೃದ್ಧಿಯಾಗುವಂತೆ, ಎಲ್ಲ ಉದ್ಯೋಗಗಳು ಮತ್ತು ಗಳಿಕೆಯೂ ಸಂಯುಕ್ತವೆಂದೇ ಭಾವಿಸುವಂತೆ ಕಾಯಿದೆಯಲ್ಲಿ ವ್ಯವಸ್ಥೆಯಾಗತಕ್ಕದ್ದು.

ಒಕ್ಕಲಿಗನಿಗೆ ತನ್ನ ಹೊಲವೆಂದರೆ ಪ್ರಾಣ. ಅವನು ಸುಲಭವಾಗಿ ಅದನ್ನು ಕಳೆದುಕೊಳ್ಳಲಾರ. ಕಾಯದೆಯನ್ನು ತಪ್ಪಿಸಲಿಕ್ಕೆ ಅವನು ಶಕ್ತಿಮೀರಿ ಪ್ರಯತ್ನಿಸುವನು. ಆದುದರಿಂದ ಅವನು ನ್ಯಾಯ್ಯ ಮತ್ತು ಸರ್ವೋದಯ ಮಾರ್ಗವನ್ನು ಅವಲಂಬಿಸುವಂತೆ ಅವನ ಮನವೊಲಿಸದಿದ್ದರೆ ಬಹಳ ಅನನುಕೂಲವಾಗುವದು.

ನ್ಯಾಯದಾನದಲ್ಲಿ ವಿಲಂಬವಾಗದಂತೆ ನೋಡಿಕೊಳ್ಳುವದು ಇಷ್ಟವೆಂಬಲ್ಲಿ ಯಾವ ಸಂಶಯವೂ ಇಲ್ಲ; ಆದರೆ ನ್ಯಾಯಾಸನದ ಕಕ್ಷೆಯೊಳಗಿಂದಲೆ ವಿಷಯಗಳನ್ನು ಹಾಂಸಿ ಬಿಡುವದು ಉಚಿತವಾದುದಲ್ಲ. ನ್ಯಾಯಾಲಯಗಳ ಅಧೀನದಲ್ಲಿನ [illegible], [illegible] ನ್ಯಾಯದಾನ [illegible] ಮತ್ತು [illegible] ಬೇಡಿಕೆಯು [illegible] ವಾಗುವದು. ಕಾಯದೆಯ [illegible] ಅರ್ಥ [illegible] ಮತ್ತು ಸಾಕ್ಷಿಯನ್ನು ಯೋಗ್ಯ ರೀತಿಯಿಂದ ಪರಿಶೀಲಿಸಿದ್ದಾಗಿದೆ ಮತ್ತು ನ್ಯಾಯವನ್ನು ದಯಪಾಲಿಸಲಾಗಿದೆ ಎಂಬುದನ್ನು ನೋಡಿಕೊಳ್ಳುತ್ತಿರುವ ನ್ಯಾಯಾಲಯಗಳ ಅಧಿಕಾರವನ್ನೇ [illegible] ಸರ್ಕಾರದ [illegible] [illegible]. [illegible] ರೂಪದಲ್ಲಿ ಪರಿವರ್ತಿಸುವುದು ಕೋರ್ಟಿನಲ್ಲಿ [illegible] ಅನುಕೂಲವೆನಿಸಬಹುದು. ಆದರೆ ನಿಜವಾಗಿ ಅದು [illegible] ತಪ್ಪಾದ [illegible]ತಿಯು. ಜಮೀನುದಾರನ ಪಾಲಿನ ಪ್ರಮಾಣವನ್ನು ಇಂತಿಷ್ಟೆಂದು ಗೊತ್ತುಪಡಿಸತಕ್ಕದ್ದು. ಇಂತಿಷ್ಟು ವರುಷಗಳ ವರೆಗೆ ಅದು ನಡೆಯತಕ್ಕದ್ದೆಂದೂ ಗೊತ್ತುಮಾಡಬೇಕು. ವರುಷ ವರುಷ ಬದಲಾಗತಕ್ಕ [illegible] ಇಲ್ಲವೆ ಒಂದು ಖಚಿತ ಪ್ರಮಾಣವೆಂದು ಅದನ್ನು [illegible] ಅಥವಾ [illegible] ಎಂದು ಗೊತ್ತುಮಾಡಿಡಬೇಕು. ಲ್ಯಾಂಡ ರೆವಿನ್ಯೂ ಕಾಯದೆಯಂತೆ ಲಾವಣಿಯನ್ನು ಕಡಿಮೆ ಮಾಡಿದಂತೆ, ದುರ್ಭಿಕ್ಷ ವರುಷಗಳಲ್ಲಿ ಜಮೀನುದಾರನಿಗೆ ಕೊಡತಕ್ಕ ಈ ಪ್ರಮಾಣವನ್ನೂ ಕಡಿಮೆ ಮಾಡಬೇಕು ಇಲ್ಲವೆ ಸೂಟು ಬಿಡಬೇಕು.

# ವಿವಿಧ ಪ್ರಪಂಚ

## ಗೊರಕೆಗೆ ಮದ್ದು

ಆಗೀಗ ಗೊರಕೆಗೆ ಇದು ಪರಿಹಾರಕ ಉಪಾಯವು, ಇದು ಮದ್ದು ಎಂದು ಅನೇಕರು ಹೇಳಿ ಅಪ್ರಯೋಜಕವಾಗಿರುವುದುಂಟು. ಇತ್ತೀಚೆಗೆ ಅಮೇರಿಕೆಯ ಒಬ್ಬ ವೈದ್ಯ "ಪ್ಲಾಸ್ಟಿಕ್"ನ ಒಂದು ಒಳೆಯನ್ನು ಬಾಯಲ್ಲಿಟ್ಟುಕೊಂಡು ಮಲಗಿದರೆ ಗೊರಕೆ ಬರುವದಿಲ್ಲವೆಂದು ಕಂಡುಹಿಡಿದ್ದಾನೆ. ಅದು ಗಾಳಿ ತಾಲುವಿನ ಮೇಲೆ ಸಂಚರಿಸಿ ಸ್ವರ ಹೊರಡಿಸದಂತೆ ಮಾಡುತ್ತದೆ.

ಇನ್ನೊಂದು ಸಾಧನವೆಂದರೆ ಒಂದು ಬಗೆಯ ಕಡಿವಾಣ. ಅದನ್ನಿಟ್ಟ ಅಮೇರಿಕದ ೩೦ ವರ್ಷಗಳ ಹಿಂದೆ ತಯಾರಿಸಿದ್ದ. ಅದನ್ನು ಹಾಕಿಕೊಂಡವನು ಬಾಯಿ ಮುಚ್ಚಿಕೊಂಡೇ ಮಲಗಬೇಕಾಗುವುದರಿಂದ ಗೊರಕೆಯನ್ನು ಯಾವ ಕಾರಣದಿಂದಲೂ ಹೊಡೆಯಲಾರ. ಹಾಕಿಕೊಂಡ ಮೊದಲ ಸಲ ಮಾತ್ರ ೧ ಗಂಟೆ ಉರಿಯುತ್ತದೆ. ಕಡೆಗೆ ತ್ರಾಸಾಗುವುದಿಲ್ಲ. ಅಲ್ಲದೆ ಈ ಕಡಿವಾಣ ಹಾಕಿಕೊಳ್ಳುವದರಿಂದ ಚಿಕ್ಕ ಚಿಕ್ಕ ಕಾಹಿಲೆಗಳೂ ನಾಶವಾಗುವುವಂತೆ.

ಅಂಗಾತ ಮಲಗುವುದರಿಂದ ಗೊರಕೆ ಹೊರಡುವುದರಿಂದ ಮಲಗುವಾಗ ಹಾಕುವ ಜೇಬಿನಲ್ಲಿ ಟೆನ್ನಿಸ್ ಚೆಂಡುಗಳನ್ನು ಹೊಲಿಸಿಕೊಂಡು ಮಲಗಿದರೆ ಮಗ್ಗುಲಲೇ ಮಲಗಬೇಕಾಗಿ ಗೊರಕೆ ಬರುವದಿಲ್ಲವೆಂದು ಮತ್ತೊಬ್ಬ ಕಂಡುಹಿಡಿದ.

ಫ್ರೆಂಚ್ ವಿಜ್ಞಾನಿ ಡಾ. ಜಾರ್ಜಸ್ ಗೌತೀರರು ೨೭ ವರ್ಷಗಳ ಕಾಲ ಸಂಶೋಧನೆ ನಡೆಸಿ ೧೯೩೪ ರಲ್ಲಿ ಪತ್ರಿಕೆಗಳಲ್ಲಿ ಮೂಗಿನಿಂದ ಗಂಟಲವರೆಗೆ ವಾಯುದ್ವಾರ ಚಿಕ್ಕದಿರುವುದರಿಂದ ಗೊರಕೆಯೇಳುವುದೆಂದೂ ಅದನ್ನು ವಿಸ್ತರಿಸಿದರೆ ಗೊರಕೆ ನಿಲ್ಲುವುದಲ್ಲದೆ ಶೀತ, ತಲೆನೋವು, ಅಸ್ತಮಾ ಮತ್ತು ಕಿವುಡುಗಳು ನಾಶವಾಗುವವೆಂದೂ ಸಾರಿದರು.

ಚಿಕಾಗೋದಲ್ಲಿ ಇನ್ನೊಬ್ಬರು ಗೊರಕೆ ಹೊಡೆದ ತಪ್ಪಿಗಾಗಿ ಇಪ್ಪತ್ತೈದು ಶಿಲಿಂಗ್ ದಂಡ ತೆರಬೇಕಾಯಿತು. ಗೊರಕೆಯ ವಿರುದ್ಧ ಕಾಯದೆ ಇಲ್ಲವಾದರೂ ಶಾಂತಿಭಂಗದ ವಿರುದ್ಧ ಇರುವುದರಿಂದ ಅವನಿಗೆ ದಂಡ ವಿತ್ತೆಂದು ನ್ಯಾಯಾಧಿಕಾರಿ ಹೇಳಿದ.

## ಹುಡುಗಿಯರ ದಳ

ನ್ಯೂಯಾರ್ಕಿನಲ್ಲಿ ಪೋಲೀಸು ಹುಡುಗಿಯರನ್ನು ಜಪಾನೀ ಆತ್ಮರಕ್ಷಣ ವಿದ್ಯೆಯಾದ ಜುಜುತ್ಸುವಿನಲ್ಲಿ ತರಬೇತು ಕೊಟ್ಟು ಸಾರ್ವಜನಿಕ ಸ್ಥಳಗಳಲ್ಲಿ ಹೆಂಗಸರಿಗೆ ಗಂಡಸರು ನಿಷಿದ್ಧ ರೀತಿಯಿಂದ ಕಾಮಾಚಾರಕ್ಕೆಳೆಯಲು ಯತ್ನಿಸುವ ಗಂಡಸರನ್ನು ಹಿಡಿದು ಜೈಲಿಗೆ ಕಳಿಸಲು ನಿಯಮಿಸಲಾಗಿದೆ. ಆಧುನಿಕತೆ ನಾಗರಿಕತೆಗೆ ಕಳಸವಿಟ್ಟ ಅಮೇರಿಕದ ಏಕಮೇವಾದ್ವಿತೀಯ ಶ್ರೇಷ್ಠ ನಗರ ನ್ಯೂಯಾರ್ಕಿನಲ್ಲಿ ಈ ಬೀಭತ್ಸ ಲೀಲೆ! ಇದು ನಮ್ಮಲ್ಲಿ ಪಾಶ್ಚಾತ್ಯ ನಾಗರಿಕತೆಯಲ್ಲಿ ಎಲ್ಲವೂ ಚೆನ್ನೆಂಬ ಮೂರ್ಖರಿಗೊಂದು ಪಾಠವಾಗಿದೆ. ಅಲ್ಲಿಯ ಸಿನೆಮ ಪದ್ಧತಿ, ಕುಣಿತ, ಕುಡಿತ, ನಾನಾ ಚಾರಗಳನ್ನು ಆಧುನಿಕವೆಂದು ತಿಳಿವ ಮೂಢರು ಕಣ್ಣು ತೆರೆದು ಈ ಸಂಗತಿಯನ್ನು ಗಮನಿಸಬೇಕು.

ಹುಡುಗಿಯರ ದಳದಲ್ಲಿ ಒಬ್ಬಳಿಗೆ ಜನದೆ ನುಗ್ಗಿರುವ ಕಾಲದಲ್ಲಿ ಮೂರೇ ದಿನಗಳಲ್ಲಿ ಇಬ್ಬರು ಗಂಡಸರು ಮುತ್ತಿಡಲು ಬಂದರಂತೆ; ಅಂಥವರನ್ನು ಆಗಲೇ ಅವಳು ಹತ್ತಿರದ ಪೋಲೀಸು ಠಾಣೆಗೆ ಕರೆದುಕೊಂಡು ಹೋದಳು. ಇದರ ಜೊತೆಗೆ ಪ್ಯಾರಿಸ್, ಹಾಲಿವುಡ್ ಮುಂತಾದೆಡೆಗಳಲ್ಲಿ ಗಂಡಸರನ್ನು ಕಾಮಾಚಾರಕ್ಕೆಳೆವ ಹುಡುಗಿಯರನ್ನೂ, ವೇಶ್ಯೆಯರನ್ನು ಹಿಡಿಯಲು ತರುಣರ ದಳವನ್ನು ಸ್ಥಾಪಿಸುವುದು ಅಗತ್ಯವಾಗಿದೆಯೆಂದು ಹೇಳದಿರಲಾಗದು. ಅತ್ಯಂತ ಹೇಯವಾದ ಈ ಕಾರ್ಯದಿಂದ ಸ್ತ್ರೀಪುರುಷರನ್ನು ವಿಮುಖರನ್ನಾಗಿ ಮಾಡಲು ಸಾಕಷ್ಟು ಯತ್ನ ನಡೆದಿಲ್ಲ. ಹಿಂದುಸ್ತಾನದ ಸಾಮಾಜಿಕರೂ ಸರಕಾರಗಳೂ ನಾಗರಿಕತೆಯನ್ನು ಅಧೋಗತಿಗಿಳಿಯದಂತೆ ಕಾಪಾಡಬೇಕಾದರೆ ಇತ್ತ ಹೆಚ್ಚು ಲಕ್ಷ್ಯ ಕೊಡಬೇಕು.

## ಹಳೆಯ ರಸಿಕತೆ

ಹಿಂದುಸ್ತಾನದಲ್ಲಿ ಪುರಾತನ ಕಾಲದಿಂದ ನಡೆದು ಬಂದ ಹಳೆಯ ಧೂಮ್ರಪಾನ ರಸಿಕತೆಯೆನಿಸಿ ಮೆರೆದುದಕ್ಕೆ ತಾಂಬೂಲಚರ್ವಣವೊಂದು ನಿದರ್ಶನ. ಸಿಗರೇಟಿನ ಬಗ್ಗೆ ಮನಶಾಸ್ತ್ರಗಳು "Smoking is a form of oral eroticism and an effective and satisfying reversion to our infantile method of seeking comfort and solace— ಹೊಗೆ ಬತ್ತಿ ಸೇದುವುದು ಒಂದು ಮುಖನಿಷ್ಠ ಶೃಂಗಾರ ವಿಲಾಸ ಮತ್ತು ಅದು ಒಂದು ತೃಪ್ತಿದಾಯಕವಾದ, ಶಿಶುಸಹಜ ರೀತಿಯಿಂದ ಸುಖ ಶಾಂತಿ ಪಡೆವ ಸಾಧನ" ಎಂದಿರುವಂತೆ ತಾಂಬೂಲವನ್ನು ವೈದ್ಯಕೀಯ ಗ್ರಂಥಗಳಲ್ಲಿ—

"ತಾಂಬೂಲಂ ಕಟುತಿಕ್ತ ಮಿಶ್ರ ಮಧುರಂ
ಕ್ಷಾರಂ ಕಷಾಯಾನ್ವಿತಂ
ವಾತಘ್ನಂ ಕಫನಾಶನಂ ಕೃಮಿಹರಂ
ದೌರ್ಗಂಧ್ಯ ದೋಷಾಪಹಂ
ವಕ್ತ್ರಸ್ಯಾಭರಣಂ ಮಲಾಪಹರಣಂ
ಕಾಮಾಗ್ನಿಸಂದೀಪನಂ
ತಾಂಬೂಲಸ್ಯ ಸಖೇ ತ್ರಯೋದಶಗುಣಾ:
ಸ್ವರ್ಗೇಪ್ಯಮೀ ದುರ್ಲಭಾ:"

ಎಂದು ಹೇಳಿದೆ.

ದಿನವೊಂದಕ್ಕೆ ಹಿಂದುಸ್ತಾನದ ಪ್ರತಿಯೊಂದು (ಶಿಶು, ಸ್ತ್ರೀ, ಪುರುಷ) ವ್ಯಕ್ತಿ ಒಂದೊಂದು ಎಲೆಯಂತೆ ತಿಂದರೆ ಎಲೆಯೊಂದಕ್ಕೆ ಒಂದು ಪಿಲ್ಲೆ ಲೆಕ್ಕ ಹಿಡಿದು ೬೦ ಲಕ್ಷ ರೂಪಾಯಿ ಖರ್ಚಾಗುವುದೆಂದು ಗುಣಿಸಿ ನೋಡಲಾಗಿದೆ. ಇದೀ ವರ್ಷದಲ್ಲಿ ಆ ವೆಚ್ಚ ೨೧೯ ಕೋಟಿ ರೂಪಾಯಿಗಳಷ್ಟಾಗುತ್ತದೆ. ಎಲ್ಲರೂ ಎಲೆಯಡಿಕೆ ತಿನ್ನುವುದಿಲ್ಲವಾದರೂ ತಿನ್ನುವವರು ಬಹುಸಂಖ್ಯರಿದ್ದು; ಅವರು ಒಂದಕ್ಕಿಂತ ಹೆಚ್ಚು ಎಲೆಗಳನ್ನು ಪ್ರತಿನಿತ್ಯ ತಿನ್ನುವುದರಿಂದ ಈ ಅಂದಾಜು ಸರಾಸರಿ ಹೊಂದುವದೆಂದು ಲೆಕ್ಕಹಾಕಲಾಗಿದೆ. ರಾಷ್ಟ್ರದ ಆದಾಯ ಪ್ರತಿ ವರ್ಷ ಇಷ್ಟು ಮಟ್ಟಿಗೆ ಅಪವ್ಯಯವಾಗುತ್ತಿದೆ!

ಇದರ ಮೇಲೆ ಈ ಎಲೆಯಡಕೆ ತಿಂದವರು ಮನೆಯೆದುರಿನ ಹಾದಿಬೀದಿಗಳಲ್ಲಿ ಉಗುಳಿದ್ದನ್ನು ತೆಗೆಯಿಸಬೇಕಾದರೆ ಮೇಲಿನದಕ್ಕೆ ಎರಡರಷ್ಟು ಹಣ ಬೇಕಾಗುತ್ತದೆ. ಅಮೇರಿಕ ಮುಂತಾದ ದೇಶಗಳಲ್ಲಿ ಸೇದುಬತ್ತಿಯ ತುಂಡು ಮತ್ತು ಅಗಿವ ಅಂಟುಗಳ ಎಂಜಲವನ್ನು ಬೀದಿಯ ಮೇಲೆ ಒಗೆದರೆ ಸುತ್ತುಮುತ್ತಿನ ಜನರು ಹುಬ್ಬುಗಂಟಿಕ್ಕುವರಲ್ಲದೆ ಸರಕಾರ ದಂಡ ಹಾಕುವುದು. ಆದರೆ ಹಿಂದುಸ್ತಾನದಲ್ಲಿ ಎಲೆಯಡಿಕೆಯ ತಂಬುಲವಷ್ಟೇ ಏಕೆ, ಬಾಳೆ ಹಣ್ಣು ಕಿತ್ತಳೆ ಹಣ್ಣುಗಳ ಸಿಪ್ಪೆ ಮತ್ತು ಇನ್ನೂ ಇತರ ಅವರ್ಣನೀಯವಾದ ಹೊಲಸುಗಳನ್ನು ಸಿಕ್ಕ ಸಿಕ್ಕದಲ್ಲಿ ಎಸೆದರೂ ಹೇಳುವವರಿಲ್ಲ, ಕೇಳುವವರಿಲ್ಲ! ಮಕ್ಕಳ ತಾಯಂದಿರು ನಗರಗಳಲ್ಲಿ ಬೆಳಗ್ಗೆ ರಸ್ತೆಯ ಮಗ್ಗುಲುಗಳನ್ನು ಸಿಂಗರಿಸುವುದನ್ನು ಸ್ಥೈರ್ಯಾಧಿಕಾರಿಗಳು ಸಹ ನಿಲ್ಲಿಸಲಾರದಾಗಿರುವುದು ಪ್ರತ್ಯಕ್ಷವಿದೆ!

ಇದು ನಾಗರಿಕತೆ ಹಬ್ಬಿದ ಕಾಲ!
ಇದೆ ನಾಗರಿಕರ ಮಬ್ಬಿನ ಶೀಲ!

## ರೇಡಿಯೋ ಐಸೋಟೋಪ್

ಮೈಕ್ರೋಸ್ಕೋಪ್ (ಸೂಕ್ಷ್ಮದರ್ಶಕ) ಯಂತ್ರದ ನಂತರ ನಿರ್ಮಿಸಿದ ಬಹು ಮುಖ್ಯವಾದ ಯಂತ್ರವೆಂದರೆ ರೇಡಿಯೋ ಐಸೋಟೋಪ್. ಅಮೇರಿಕದ ಸಂಯುಕ್ತ ಸಂಸ್ಥಾನದಲ್ಲಿ ಇದನ್ನು ರಾಶಿ ರಾಶಿಯಾಗಿ ತಯಾರಿಸಲು ಅಲ್ಲಿಯ ಅಣುಶಕ್ತಿ ಸಮಿತಿ ಯೋಜಿಸಿದೆ. ಐಸೋಟೋಪ್. ರೇಡಿಯೋ ಕ್ರಿಯಾತ್ಮಕ ದ್ರವ್ಯ. ಅದು ಕ್ಷ ಕಿರಣದಂತಹ ಕಿರಣಗಳನ್ನು ಬಿಡುತ್ತದೆ. ವಾಯುವಿನ ಮತ್ತು ಮಣ್ಣಿನ ರಸಾಯನ ದ್ರವ್ಯಗಳನ್ನು ಸಸ್ಯಗಳು ಹೇಗೆ ಆಹಾರವನ್ನಾಗಿ ಪರಿವರ್ತಿಸುತ್ತವೆ ಎಂಬುದನ್ನು ಶೋಧಿಸುವ ಕಾರ್ಯದಲ್ಲಿ ಇದು ಬಹಳ ಸಹಕಾರಿಯಾಗಿದೆ. ಆಹಾರದ ಮೇಲೆಯೆ ಜೀವನ ಅವಲಂಬಿಸಿದೆ. ಇದರಿಂದ ತಯಾರಿಸಿದ "ಟ್ರೇಸರ್"ನ ಮೂಲಕ ರಕ್ತಚಲನೆ, ಬಾಯುವಿಕೆ ಮುಂತಾದ ವಿವಿಧ ರೋಗಾಣುಗಳ ಪರೀಕ್ಷೆ ಮಾಡಲಾಗುತ್ತದೆ.

ವರ ಕೊಯ್ದು ಹುಡಿಯನ್ನು ರೇಸಿನ್ನಿನೊಡನೆ ಮಿಶ್ರ ಮಾಡಿ ಲಂಡನ್ ಸಂಶೋಧನ ಕೇಂದ್ರದಲ್ಲಿ ಕಟ್ಟಡಕ್ಕೆ ಯೋಗ್ಯವಾದ ಹಲಗೆಗಳನ್ನು ತಯಾರಿಸುತ್ತಿರುವುದು.

## ನೋಟೀಸು

ಗುರುನಾಥ ವೆಂಕಟ್ರಮಣ ಹೆಗ್ಡೆ ಸಾ॥ ಹರೀಸೆ ಶಿವಮೊಗ್ಗಾ ಡಿಸ್ಟ್ರಿಕ್ಟ ತಾಲೂಕ ಸೊರಬ, ಚಂದ್ರಗುತ್ತಿ ಹೋಬಳಿ ಇವರು ಈ ನೋಟಿಸಿನ ಮೂಲಕ ಯಾವತ್ತೂ ಜನರಿಗೆ ತಿಳಿಸುವದೇನಂದರೆ: —

ನನ್ನ ತಮ್ಮ ಕೃಷ್ಣಪ್ಪ ವೆಂಕಟ್ರಮಣ ಹೆಗ್ಡೆ ಈತನು ೧॥ ವರ್ಷದ ಹಿಂದೆ ಮರಣಪಟ್ಟದ್ದು ಹರೀಸೆ ವ ಇತರೇ ಗ್ರಾಮದ ಸದ್ರಿಯವನ ಖಾತೆ ಇದ್ದ ಆಸ್ತಿ ಅವನ ಹೆಂಡತಿ ಗಂಗಾಬಾಯಿ ಕೋಂ ಕೃಷ್ಣಪ್ಪ ಹೆಗ್ಡೆ ಇವಳು ನಿಪುತ್ರವತಿ ಇದ್ದು ಸದ್ರಿ ಮೃತನ ಆಸ್ತಿಗಳನ್ನು ಪರಾಧೀನ ಮಾಡುವ ಬಾತ್ಮಿ ತಿಳಿದಿದ್ದರಿಂದಾ ಈ ನೋಟೀಸ ಕೊಟ್ಟಿದೆ. ಸದ್ರಿ ಗಂಗಾಬಾಯಿಗೆ ಮೃತನ ಜಾಬ್ತಾ ಚರಸ್ಥಿರ ಆಸ್ತಿಗಳನ್ನು ಪರಾಧೀನ ಮಾಡುವ ಹಕ್ಕಿಲ್ಲಾ. ಸದ್ರಿ ಕೃಷ್ಣಪ್ಪ ವೆಂಕಟ್ರಮಣ ಹೆಗ್ಡೆಯ ಮೃತ ಕಾಲಕ್ಕೆ ಯಾವದೂ ಸಾಲ ವಗ್ಯೆರೆ ಏನೂ ಇಲ್ಲಾ. ಯಾವದೇ ತರದ ಪೋಕಳ ಸಾಲ ವಗ್ಯೆರೆ ತೋರಿಸಿ ಆಸ್ತಿ. ಪರಾಧೀನ ಮಾಡಿದ್ದಲ್ಲಿ ಸದ್ರಿ ಪರಾಧೀನತೆ ನನಗೆ ವ ಇತರೇ ವಾರಸದಾರರಿಗೆ ಯಾವದೇ ಬಾಧೆ ಬರುವಂತಿಲ್ಲಾ ತಿಳಿದಿರಲಿ ಇದಕ್ಕೆ ಸಂಬಂಧಪಟ್ಟ ಆಸ್ತಿಗಳ ಸರ್ವೇ ನಂಬ್ರ ಹರೀಸೆ ಗ್ರಾಮದಲ್ಲಿರುವ ಆಸ್ತಿಯ ಸರ್ವೇ ನಂಬ್ರ. ೧ - ೧೨ + ೨೫ + ೨೫೦/೧ + ೨೫೦/೩ + ೧೩೮/೧ ೧೫೩/೧ + ೧೭೩ + ೨೩೭/೧

ಮಂಗರಶಿಕೊಪ್ಪದಲ್ಲಿರುವ ಆಸ್ತಿಯ ಸರ್ವೇ ನಂಬ್ರ. ೨೩೭/೨ ೧/೩ + ೧೨.

ಈ ಪ್ರಕಾರ ಇರುವ ಆಸ್ತಿಗಳಲ್ಲಿ ಸದ್ರಿ ಗಂಗಾಬಾಯಿ ಕೋಂ ಕೃಷ್ಣಪ್ಪ ಹೆಗ್ಡೆ ಇವಳಿಗೆ ಪರಾಧೀನತೆಯ ಯಾವಥರದ ಹಕ್ಕಿಲ್ಲಾ ಅದ್ದರಿಂದಾ ಯಾರು ಕ್ರಯ ಅಡವು ವಗ್ಯೆರೆ ಮಾಡಿಸಿಕೊಳ್ಳಬಾರದು.

ಗುರುನಾಥ ವೆಂಕಟ್ರಮಣ ಹೆಗಡೆ

# ಮೈಸೂರು ಪ್ರಜಾ ಪ್ರತಿನಿಧಿ ಸಭೆ
## ದಸರಾ ಅಧಿವೇಶನ

ಮೈಸೂರು ಪ್ರಜಾ ಪ್ರತಿನಿಧಿ ಸಭೆಯು ತಾ. ೯ ರಂದು ಮಧ್ಯಾಹ್ನ ೧೨ ಗಂಟೆಯಿಂದ ಪ್ರಾರಂಭವಾಯಿತು. ಮೈಸೂರಿನ ಮುಖ್ಯ ಮಂತ್ರಿ ಶ್ರೀ ಕೆ. ಚೆಂಗಲರಾಯರೆಡ್ಡಿಯವರು ಸಭೆಯ ಅಧ್ಯಕ್ಷತೆ ವಹಿಸಿದ್ದರು. ಅವರು ತಮ್ಮ ಸುದೀರ್ಘ ಭಾಷಣದಲ್ಲಿ ಸ್ವಾತಂತ್ರ್ಯ ನಂತರದ ಭಾರತದ ಸಮಸ್ಯೆಗಳನ್ನೂ ಸಂಸ್ಥಾನಗಳ ಸೇರ್ಪಡೆಯ ವಿಷಯವನ್ನೂ ಹೈದರಾಬಾದದ ಹೊಲಬುಗೆಟ್ಟ ದುರಾಗ್ರಹವನ್ನು ಕೊನೆಗೆ ಬಗ್ಗು ಬಡಿದು ಹೈದರಾಬಾದಿಗಳನ್ನು ವಿಮೋಚನೆಗೊಳಿಸಿದ ಹಿಂದುಸ್ಥಾನ ಸರಕಾರದ ಕ್ಷಮತೆಯನ್ನೂ ವಿಮರ್ಶಿಸಿ ಹಿಂದುಸ್ಥಾನ ಸಂಸ್ಥಾನ ಮಂತ್ರಿ ಸರದಾರ ಪಟೇಲರ ಚಾಣಾಕ್ಷತೆಯನ್ನು ಕೊಂಡಾಡಿ ಹೈದರಾಬಾದದಲ್ಲಿ ಮೈಸೂರು ಸೈನಿಕರು ತೋರಿದ ಶೌರ್ಯ ಸಾಹಸಗಳನ್ನು ಹೆಮ್ಮೆಯಿಂದ ಹೊಗಳಿ ಗೌರವಿಸಿದರು. ಈ ಭಾಷಣವನ್ನು ಇಂಗ್ಲೀಷಿನಲ್ಲಿ ಮಾಡಿದ್ದರಿಂದ ಆ ಮೇಲೆ ಇದರ ಭಾಷಾಂತರವನ್ನು ಕನ್ನಡದಲ್ಲಿ ಹೇಳಬೇಕಾಯಿತು. ಸ್ವತಂತ್ರ ಕನ್ನಡ ರಾಜ್ಯದಲ್ಲಿ ಅದೂ ಇಂದಿನ ವಾತಾವರಣದಲ್ಲಿ ಈ ಇಂಗ್ಲೀಷಿನ ಬಳಕೆ ಅನವಶ್ಯಕ ಮತ್ತು ಕಾಲವ್ಯಯಕ್ಕೆ ಕಾರಣ. ಇರಲಿ. ಹೋದ ಅಧಿವೇಶದಲ್ಲಿ ಪ್ರ. ಪ್ರ. ಸಭೆಯು ಸ್ವೀಕರಿಸಿದ ಮಸೂದೆಗಳಿಗೆ ಶ್ರೀ ಮನ್ಮಹಾರಾಜರ ಮನ್ನಣೆ ದೊರೆತುದನ್ನು ಸಭೆಯ ಕಾರ್ಯದರ್ಶಿಗಳು ಅರುಹಿದರು.

ನಂತರ ಜಿನ್ನಾರವರ ಮತ್ತು ಶ್ರೀ ನರಿಮಾನರ ನಿಧನದ ಬಗ್ಗೆ ದುಃಖ ಸೂಚಕ ಮಸೂದೆಗಳು ಸ್ವೀಕೃತವಾದವು. ಹೈದರಾಬಾದದಲ್ಲಿ ಹಿಂದೀ ಸೈನಿಕರು ಪಡೆದ ವಿಜಯದ ಬಗ್ಗೆ ಅವರನ್ನು ಅಭಿನಂದಿಸುವ ಗೊತ್ತುವಳಿಯೂ ಅಂಗೀಕರಿಸಲ್ಪಟ್ಟಿತು. ಈ ಬಗ್ಗೆ ಮಾತನಾಡಿದವರೆಲ್ಲ ರಜಾಕಾರರ ರಾಕ್ಷಸೀ ಕೃತ್ಯಗಳನ್ನು ಖಂಡಿಸಿದರು. ಹೈದರಾಬಾದವನ್ನು ವಿಭಜಿಸಿ ಆಂಧ್ರ, ಕರ್ನಾಟಕ, ಮಹಾರಾಷ್ಟ್ರ ಪ್ರಾಂತಗಳಲ್ಲಿ ಹಂಚಿ ಬಿಡಬೇಕೆಂದು ಕೆಲವರು ಪ್ರತಿಪಾದಿಸಿದರು. ಹೈದರಾಬಾದದಲ್ಲಿ, ಹೊಣೆಗಾರ ಸರಕಾರದ ಹೆಸರಿನಲ್ಲಿ ಸ್ವಾರ್ಥ ಸಾಧಕ ಮುಖಂಡರು ಹೈದರಾಬಾದಿಗಳಿಗೆ ಸಿಗದಿರಲಿ ಎಂದು ಒಬ್ಬರು ಉದ್ಗಾರ ತೆಗೆದರು.

ಇಂದಿನ ಪ್ರಶ್ನೋತ್ತರಗಳ ನಂತರ ಅರ್ಥ ಸಚಿವರಾದ ಮಾನ್ಯ ದಾಸಪ್ಪನವರು ಜೂಜಾಟದ ಮೇಲಿನ ಕರ ಹೆಚ್ಚಿಸುವ ಮಸೂದೆಯನ್ನು ಮಂಡಿಸಿದರು. ಈ ಬಗ್ಗೆ ಒಳ್ಳೆ ತುರುಸಿನ ಚರ್ಚೆಯಾಯ್ತು. ಮದ್ಯಪಾನದಷ್ಟೇ ಜೂಜಾಟವೂ ಹೇಯವೂ ಘಾತಕವೂ ಆದ್ದರಿಂದ ಜೂಜಾಟದ ಕರದ ಮೂಲಕ ಸರಕಾರವು ಸಂಪಾದನೆ ಹೆಚ್ಚಿಸಿಕೊಳ್ಳುವದು ಬೇಡವೆಂದೂ ಜೂಜಾಟವು ಒಂದು ಸಾಮಾಜಿಕ ರೋಗವಿದ್ದು ಅದನ್ನು ನಿರ್ಬಂಧಿಸಬೇಕಲ್ಲದೆ ನಿರ್ಮೂಲಗೊಳಿಸಬೇಕೆಂದೂ ಅನೇಕರು ವಾದಿಸಿದರು. ಕೊನೆಗೆ ಈ ಮಸೂದೆಯು ಮತಗಣನೆಗೆ ಗುರಿಯಾಗಿ ಪ್ರಚಂಡ ಬಹುಮತದಿಂದ ಸ್ವೀಕೃತವಾಯ್ತು. ಸಭೆ ೧೩ ನೇ ತಾ. ಮುಂದರಿಯಿತು.

ಜಗನ್ಮೋಹನ ಅರಮನೆಯಲ್ಲಿ ತಾ. ೧೩ ರಂದು ಪುನಃ ಮೈಸೂರು ಪ್ರಜಾ ಪ್ರತಿನಿಧಿಯ ಸಭೆಯು ಮುಖ್ಯ ಮಂತ್ರಿ ಶ್ರೀ ಚೆಂಗಲರಾಯ ರೆಡ್ಡಿಯವರ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು.

ಶ್ರೀ ಭಾಷ್ಯಂರವರು ವಿಶೇಷ ಲಾಭಕರದ ತಿದ್ದುಪಡಿ ಮಸೂದೆಯನ್ನು ಮಂಡಿಸಿದರು. ಈ ಬಗ್ಗೆ ಮಾತನಾಡುತ್ತ ಈ ಮೊದಲು ಮಾಡಿದ ಅಧಿಕ ಲಾಭಕರದ ಕಾನೂನಿನಲ್ಲಿ ಹೇಳಿದ ಅವಧಿಯನ್ನು ಹೆಚ್ಚಿಸುವ ಉದ್ದೇಶದಿಂದ ಈ ಮಸೂದೆ ಮುಂದೆ ಬಂದಿದೆಯೆಂದು ಹೇಳಿದರು. ಚರ್ಚಾನಂತರ ಇದು ಸರ್ವಾನುಮತದಿಂದ ಸ್ವೀಕೃತವಾಯ್ತು.

ಆ ಮೇಲೆ ಶ್ರೀ ಭಾಷ್ಯಂ ಅವರು ಕೂಲಿಕಾರ ಕಾನೂನು ತಿದ್ದುಪಡಿಯ ಮತ್ತೊಂದು ಮಸೂದೆಯನ್ನು ಮಂಡಿಸಿದರು. ಸರಕಾರೀ ಕಾರಖಾನೆಗಳ ಸಂಘದಲ್ಲಿ ಕೂಲಿಕಾರರಾಗಿರದವರು ಇಬ್ಬರು ಮಾತ್ರ ಸದಸ್ಯರಿರಬೇಕೆಂದೂ ಆದರೆ ಈ ಇಬ್ಬರು ಸರಕಾರೀ ನೌಕರರೇ ಆಗಿರಬೇಕೆಂದೂ ಈ ಮಸೂದೆಯಲ್ಲಿದೆ.

ಈ ಬಗ್ಗೆ ನಡೆದ ಚರ್ಚೆಯ ಕಾಲಕ್ಕೆ ಮಾಲ್ಯಾ ಗೋವಿಂದರೆಡ್ಡಿಯವರು, ಕೂಲಿಕಾರರಿಗೆ ತಮಗೆ ಬೇಕಾದವರನ್ನು ನೇಮಿಸಿಕೊಳ್ಳುವ ಹಕ್ಕು ಇದೆ. ಸರಕಾರಿ ಕಾರಖಾನೆಗೆ ಒಂದು ಖಾಸಗಿ ಕಾರಖಾನೆಗೆ ಒಂದು ಹೀಗೆ ಬೇರೆ ಬೇರೆ ಕಾನೂನಿರುವದು ಯುಕ್ತವಲ್ಲವೆಂದೂ ಇದು ಟ್ರೇಡ ಯೂನಿಯನ್ನ ಚಳವಳಿಗೆ ಕುಠಾರಪ್ರಾಯವೆಂದೂ ವಾದಿಸಿದರು. ಈ ಬಗ್ಗೆ ಅನೇಕರು ಅನೇಕ ವಿಧವಾಗಿ ಸಾಧಕ ಬಾಧಕವಾಗಿ ಮಾತನಾಡಿದರು. ಕೊನೆಗೆ ಭಾಷ್ಯಂರವರು ಚರ್ಚೆಗೆ ಉತ್ತರ ಕೊಡುತ್ತ ಹೀಗೆ ಹೇಳಿದರು:— ಕೆಲಸಗಾರರಿಗೆ ತಮ್ಮಲ್ಲಿಯವರನ್ನೇ ಮುಖಂಡರಾಗಿ ಆರಿಸಿಕೊಳ್ಳುವ ಹಕ್ಕಿದೆ. ಅವರು ಹೊರಗಿನವರನ್ನು ಆರಿಸಿಕೊಳ್ಳುವ ಕಾಲ ಬೇಗ ಬರಲಿ. ಅದು ಬರುವ ವರೆಗೆ ಖಾಸಗಿ ಕಾರಖಾನೆಯಲ್ಲಿ ಖಾಸಗಿ ಜನರಿಗೆ ಅವಕಾಶ ಕೊಡಲಾಗಿದೆ. ಆದರೆ ಸರಕಾರಿ ಉದ್ದಿಮೆಗಳಲ್ಲಿ ಆ ಅವಕಾಶ ಮೊದಲಿನ ಕಾನೂನಿನಲ್ಲಿ ಇರಲಿಲ್ಲ. ಈ ಮಸೂದೆಯ ಮೂಲಕ ಆ ಅವಕಾಶ ಕಲ್ಪಿಸಿ ಕೊಡಲಾಗಿದೆ. ಹೀಗೆ ಮೊದಲಾಗಿ ಹೇಳಿದ ಮೇಲೆ ಮಸೂದೆಯು ಬಹುಮತದಿಂದ ಸ್ವೀಕೃತವಾಯಿತು. ಮೋಟಾರ ಸಾರಿಗೆ ತಿದ್ದುಪಡಿಯ ಮಸೂದೆಯ ಚರ್ಚೆಯಾಯ್ತು. ಆರ್. ಎಸ್. ಎಸ್. ದ ಬಗ್ಗೆ ತರಲಾದ ಅವಸರದ ಗೊತ್ತುವಳಿಯು ಚರ್ಚಾನಂತರ ಬಿದ್ದು ಹೋಯ್ತು.

ತಾ. ೧೪ ರಂದು, ಮೈಸೂರಲ್ಲಿ ನೆಲಸಿದ ವಿದೇಶೀಯರನ್ನು ಹೊರಗೆ ಹಾಕಬೇಕೆನ್ನುವ ಮಸೂದೆಯೂ ಕಾರ್ಮಿಕರಿಗೆ ವಸತಿ ಸೌಕರ್ಯ ಒದಗಿಸಬೇಕೆನ್ನುವ ಮಸೂದೆಯೂ ಸರ್ವಾನುಮತದಿಂದ ಸ್ವೀಕೃತವಾದವು. ಮೋಟಾರ ಸಾರಿಗೆಯ ಮಸೂದೆಯೂ ಸ್ವೀಕೃತವಾಯ್ತು. ಮೋಟಾರ ಸಾರಿಗೆಯ ರಾಷ್ಟ್ರೀಕರಣವನ್ನು ಕ್ರಮಶಃ ಸಾಧಿಸಲಾಗುವದೆಂದು ಅರುಹಲಾಯ್ತು.

ಗೃಹಸಚಿವರು ವಿದೇಶೀಯರನ್ನು ಹೊರತಳ್ಳುವ ಮಸೂದೆಯನ್ನು ಮಂಡಿಸುತ್ತ, ಈ ಮಸೂದೆಯ ಉದ್ದೇಶ ನಿರೂಪಣೆ ಮಾಡಿದರು. ಹೈದರಾಬಾದದ ಗುಪ್ತಚಾರರು ನಡೆಸಿದ ಚಟುವಟಿಕೆಗಳನ್ನು ವಿವರಿಸಿ ಈ ಮಸೂದೆಯ ಅವಶ್ಯಕತೆಯನ್ನು ಮನದಟ್ಟು ಮಾಡಿಕೊಟ್ಟರು. ಸರ್ವಾನುಮತದಿಂದ ಮಸೂದೆ ಅಂಗೀಕೃತವಾಯ್ತು.

ಕಾರ್ಮಿಕರಿಗೆ ಮನೆ ಕಟ್ಟಿಸುವ ಮಸೂದೆಗೆ ಎಲ್ಲರೂ ಒಪ್ಪಿದರು. ಈ ಬಗ್ಗೆ ಆದ ಚರ್ಚೆಗೆ ಉತ್ತರ ಕೊಡುತ್ತ ಗೃಹ ಮಂತ್ರಿ ಶ್ರೀ. ಟಿ. ಮರಿಯಪ್ಪನವರು, ಮತ್ತು ಕೂಲಿಕಾರ ಶಾಖೆಯ ಮಂತ್ರಿ ಶ್ರೀ. ಭಾಷ್ಯಂ ಅಯ್ಯಂಗಾರರು ಹೀಗೆ ವಿವರಿಸಿದರು. ಮಾದರಿಯ ಮನೆಗಳನ್ನು ಈಗಾಗಲೇ ಬೆಂಗಳೂರಲ್ಲಿ ಕಟ್ಟಿಸಿದ್ದಾರೆ. ಒಂದು ಮನೆಗೆ ೧೨೫೦ ರೂ. ವೆಚ್ಚ ತಗಲಿದೆ. ಅಂತಹ ಮನೆಗಳನ್ನು ಎಲ್ಲ ಕಾರ್ಮಿಕರಿಗೂ ಒದಗಿಸುವ ವಿಚಾರ ಸರಕಾರಕ್ಕಿದೆ. ಸರ್ವಾನುಮತದಿಂದ ಈ ಮಸೂದೆಯು ಅಂಗೀಕೃತವಾಯ್ತು.

ತಾ. ೧೫ ರಂದು ಗೃಹ ಸಚಿವರು ಕೂಲಿಕಾರ ಮಸೂದೆ ಮಂಡಿಸಿ ಇದು ಕೂಲಿಕಾರರ ಹಿತಕ್ಕೆ ಆದರ್ಶಪ್ರಾಯವಾಗಿದೆಯೆಂದು ಹೇಳಿದರು. ಈ ಮಸೂದೆ ಸರ್ವಾಂಗಸುಂದರವೆಂದು ಒಬ್ಬರು ಹೊಗಳಿದರೆ ಇನ್ನೊಬ್ಬರು ಕೂಲಿಕಾರ ಬಂಡವಲದಾರ ಈ ಇಬ್ಬಣಗಳ ಹಿತವನ್ನೂ ಇದರಲ್ಲಿ ಸಾಧಿಸಲಾಗಿದೆಯೆಂದು ಪ್ರಶಂಸಿಸಿದರು. ಕೆಲವರು ವಿರೋಧಿಸದೆಯೂ ಇರಲಿಲ್ಲ. ಮತಗಣನೆಯಲ್ಲಿ ನಾಲ್ವರು ಮಾತ್ರ ಪ್ರತಿಕೂಲರಾಗಿ ಕೊನೆಗೆ ಈ ಮಸೂದೆ ಸ್ವೀಕೃತವಾಯ್ತು.

ಪ್ರಶ್ನೋತ್ತರದ ಕಾಲಕ್ಕೆ, ಲಕ್ಕವಳ್ಳಿ ಯೋಜನೆಯಿಂದ ೧೮ ಲಕ್ಷ ೮೦ ಸಾವಿರ ಎಕರೆ ಭೂಮಿಗೆ ನೀರು ದೊರೆಯುವದೆಂದೂ ಈ ಯೋಜನೆಗೆ ೧೦ ಲಕ್ಷ ರೂ. ವೆಚ್ಚ ತಗಲಿದೆಯೆಂದೂ ತಿಳಿದು ಬಂದಿತು.

ತಾ. ೧೬ ರಂದು ಮಧ್ಯಾಹ್ನ ೧೨ಕ್ಕೆ ಜಗನ್ಮೋಹನ ಅರಮನೆಯಲ್ಲಿ ಮೈ. ಪ್ರ. ಪ್ರ. ಸಭೆಯು ಶ್ರೀ. ಕೆ. ಟಿ. ಭಾಷ್ಯಂರ ಅಧ್ಯಕ್ಷತೆಯಲ್ಲಿ ಸೇರಿತ್ತು. ಹಳ್ಳಿಗರ ಬೇಸಾಯಕ್ಕೆ ವಿದ್ಯುತ್ತಿನ ಪೂರೈಕೆಯ ಬಗ್ಗೆ ಪ್ರಶ್ನೋತ್ತರಗಳಾದ ಮೇಲೆ ಶ್ರೀ ಭೋಸಾಲಂ ಚಂದ್ರಶೇಖರಯ್ಯನವರು ಗೋಪಾಲರಾವ ವಿಚಾರಣಾ ಸಮಿತಿಯ ಆರ್ಡಿನನ್ಸ ಬಗ್ಗೆ ನಿಲುವಳಿ ಸೂಚನೆ ತರಲು ಯತ್ನಿಸಿದರು. ಈ ಗೊತ್ತುವಳಿ ನೋಡಿ ವಿಚಾರ ಮಾಡಿ ಈ ಬಗ್ಗೆ ಮಧ್ಯಾಹ್ನ ನಿರ್ಣಯಕೊಡುವದಾಗಿ ಅಧ್ಯಕ್ಷರು ತಿಳಿಸಿದರು.

ಆ ಮೇಲೆ ಗೃಹಸಚಿವ ಶ್ರೀ ಟಿ. ಮರಿಯಪ್ಪನವರು ಸಿಡಿಮದ್ದಿನ ಮಸೂದೆ ಮಂಡಿಸಿದರು. ಅವರು ಈ ಬಗ್ಗೆ ವಿವರಣೆಕೊಡುತ್ತ ಸಿಡಿಮದ್ದಿನ ಬಗ್ಗೆ ಸಂದರ್ಭೋಚಿತವಾಗಿ ಎಚ್ಚರಿಕೆ ವಹಿಸಿ ಒಂದು ಆರ್ಡಿನನ್ಸ ಹೊರಡಿಸಬೇಕಾಯ್ತು. ಈಗ ಅದನ್ನೇ ಮಸೂದೆಯ ರೂಪದಲ್ಲಿ ಈ ಸಭೆಯ ಮುಂದೆ ಮಂಡಿಸಲಾಗಿದೆ ಎಂದು ಹೇಳಿದರು. ಸರ್ವಾನುಮತದಿಂದ ಮಸೂದೆ ಸ್ವೀಕೃತವಾಯ್ತು, ಇಂದೇ ಫಟಕಿ ಶಿಕ್ಷೆ ರದ್ದು ಪಡಿಸುವ ಮಸೂದೆಯು ಮತಗಣನೆಯ ನಂತರ ಸ್ವೀಕೃತವಾಯ್ತು.

ತಾ. ೧೮ ರಂದೂ ಸಭೆಯು ಶ್ರೀ ಕೆ. ಟಿ. ಭಾಷ್ಯಂರ ಅಧ್ಯಕ್ಷತೆಯಲ್ಲಿಯೇ ಸೇರಿತು. ಹರಿಜನರಿಗೆ ದೇವಾಲಯ ಪ್ರವೇಶಕ್ಕೆ ಅಡ್ಡಿ ಮಾಡುವವರನ್ನು ವಾರಂಟಿಲ್ಲದೆ ಪೋಲೀಸರು ಬಂಧಿಸಬಹುದೆಂಬ ಕಾನೂನನ್ನು ಸಭೆಯು ಸ್ವೀಕರಿಸಿತು. ಇದಲ್ಲದೆ ಜನರ ಆರೋಗ್ಯ ರಕ್ಷಣೆ ಪ್ರಾಥಮಿಕ ಶಿಕ್ಷಣ ತಿದ್ದುಪಡಿ ಮಸೂದೆ ಇವೇ ಮೊದಲಾದವು ಸ್ವೀಕೃತವಾದವು. ಪ್ರಶ್ನೋತ್ತರದ ಕಾಲಕ್ಕೆ, ಗ್ರಾಮಾಭಿವೃದ್ಧಿಗೆ ೫೦ ಲಕ್ಷ ರೂ. ಮಂಜೂರು ಮಾಡಲಾಗಿದೆಯೆಂದು ತಿಳಿದಿತು.

ಪಂಚಾಯತಿಗೆ ವ್ಯಾಜ್ಯವನ್ನೊಪ್ಪಿಸುವ ಮಸೂದೆಯನ್ನು ಗೃಹ ಸಚಿವ ಶ್ರೀ ಮರಿಯಪ್ಪನವರು ಮಂಡಿಸಿದರು. ಇದೂ ವಿಶೇಷ ಚರ್ಚೆಯಿಲ್ಲದೆ ಸ್ವೀಕೃತವಾಯ್ತು. ವಿಮಾ ಕಾನೂನು ತಿದ್ದುಪಡಿ ಮಸೂದೆಯು ಚರ್ಚೆಯಿಲ್ಲದೆ ಅಂಗೀಕೃತವಾಯ್ತು.

ಮದ್ರಾಸದಲ್ಲಿ

## ಪಾನನಿರೋಧದಿಂದ ನಿರುದ್ಯೋಗಿಗಳಾದವರ ಸಮಸ್ಯೆ

ಸರಕಾರದ ಪತ್ರಿಕಾ ಪ್ರಕಟನೆಯಂತೆ ೪೫೦೦ ಜನ ಮದ್ಯದ ಭಟ್ಟಿಯಿಳಿಸುವವರು ನಿರುದ್ಯೋಗಿಗಳಾಗಿದ್ದಾರೆಂದು ಹೇಳಲಾಗಿದೆ. ಮದ್ರಾಸ ಪೌರ ಸಭೆಯ ಲೆಕ್ಕದ ಪ್ರಕಾರ ನಗರದಲ್ಲಿ ೮ ಸಾವಿರ ಜನರಿಗೆ ಪಾನನಿರೋಧದಿಂದ ಕೆಲಸವಿಲ್ಲದಂತಾಗಿದೆಯೆಂದು ತಿಳಿಸಲಾಗಿದೆ. ಇದು ಕೇವಲ ನಗರಕ್ಕೆ ಸಂಬಂಧಿಸಿದ್ದಾದ ಮೇಲೆ ಇಡೀ ಪ್ರಾಂತ್ಯದಲ್ಲಿ ನಿರುದ್ಯೋಗಿಗಳಾಗಿರುವವರ ಸಂಖ್ಯೆಯನ್ನೂ ತಿಳಿದಿಲ್ಲ. ಇಷ್ಟು ಸಾವಿರ ಜನಕ್ಕೆ ಏಕಮಾತ್ರ ಜೀವನೋಪಾಯವನ್ನು ತಪ್ಪಿಸಿದ ಮೇಲೆ ಇವರಿಗೆ ಇತರ ಮಾರ್ಗಗಳನ್ನು ಒದಗಿಸಿಕೊಡಬೇಕಾದುದು ಸರಕಾರದ ಕರ್ತವ್ಯ. ಇಲ್ಲವಾದರೆ ಈ ನಿರುದ್ಯೋಗಿಗಳು ಸಮಾಜಕಂಟಕರಾಗಲು ಹಾದಿ ಹಾಕಿಕೊಟ್ಟಂತಾಗುವುದು.

ಪಾನ ನಿರೋಧ ಮಂತ್ರಿಗಳಾದ ಡಾ. ಎಸ್ ಗುರುಪಾದಂ ಅವರು ಈ ನಿರುದ್ಯೋಗಿಗಳ ಬಗ್ಗೆ ಸರಕಾರವು ಕೈಗೊಂಡಿರುವ ಯೋಜನೆಗಳನ್ನು ತಿಳಿಸುತ್ತಾ, ಸರಕಾರದ ವಿವಿಧ ಶಾಖೆಗಳಲ್ಲೂ, ಪೋಲೀಸ ಇಲಾಖೆಯಲ್ಲೂ ಕೆಳದರ್ಜೆಯ ಕೆಲಸಗಳಿಗೂ ಇವರನ್ನು ತೆಗೆದುಕೊಳ್ಳಲು ಆಲೋಚಿಸಲಾಗಿದೆಯೆಂದು ಹೇಳಿದರು. ತತ್ಸಂಬಂಧದಲ್ಲಿ Regional Employment Exchange, Milk Supply co-operative Society ಮುಂತಾದ ಸಂಸ್ಥೆಗಳಿಗೂ ಸಹ ಸರಕಾರವು ಪ್ರಾರ್ಥಿಸಿದೆ. ನಿರುದ್ಯೋಗಿ ಭಟ್ಟಿಯವರ, ಇತರರ ಕೂಗನ್ನು ಮೊಟ್ಟಮೊದಲು ಸರಕಾರಕ್ಕೆ ಎತ್ತಿತೋರಿಸಿ, ಸರಕಾರದ ಕಣ್ಣುತೆರೆಯಿಸಿದ ಹಿರಿಮೆ ತಮಿಳುನಾಡು ಕಾಂಗ್ರೆಸ ಅಧ್ಯಕ್ಷ ಶ್ರೀ ಕಾಮರಾಜ ನಾಡಾರರಿಗೆ ಸಲ್ಲತಕ್ಕದ್ದು.

ಈ ಸಂಬಂಧವಾಗಿ ಮದ್ರಾಸ ಮೇಯರರಾದ ಡಾ. ಯು. ಕೃಷ್ಣರಾಯರು, ಪರಿಹಾರ ನಿಧಿಯೊಂದನ್ನು ಕೂಡಿಸುತ್ತಿದ್ದಾರೆ. ನಗರ ಸಭೆಯವರು ರಸ್ತೆ ರಿಪೇರಿ ಮುಂತಾದ ಕೆಲಸಗಳಿಗೆ ಈ ಭಟ್ಟಿಯವರನ್ನು ಉಪಯೋಗಿಸಿಕೊಳ್ಳುತ್ತಿದ್ದಾರೆ. ಮದ್ರಾಸ ಪಾನನಿರೋಧ ಸಮಿತಿಯವರೂ ಈ ನಿರುದ್ಯೋಗಿಗಳ ಸಂಸಾರಗಳಿಗೆ ತಾತ್ಕಾಲಿಕವಾಗಿ ೧೫ ದಿನಗಳ ಪದಾರ್ಥಗಳನ್ನು ಅರ್ಧ ಬೆಲೆಗೆ ಒದಗಿಸಲು ಒಪ್ಪಿಕೊಂಡಿದ್ದಾರೆ ಸಾರ್ವಜನಿಕ ಕ್ಷೇತ್ರದಿಂದ ಎಷ್ಟೇ ಸಹಾಯಕ ಕಾರ್ಯಗಳನ್ನು ಕೈಗೊಂಡರೂ ಈ ಅಗಾಧ ಪ್ರಶ್ನೆಯ ಅಂಚನ್ನೂ ಸಹ ಮುಟ್ಟುವುದಿಲ್ಲ. ಸರಕಾರವೇ ಈ ಪ್ರಶ್ನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ದೀರ್ಘಕಾಲದ ಪರಿಹಾರ ಮಾರ್ಗಗಳನ್ನು ತೋರಿಸಿಕೊಡಬೇಕಾಗಿದೆ.

## ವ್ಯಾಪಾರ ಪ್ರಪಂಚ

### ಮುಂಬಯಿ ಶೇರ ಪೇಟೆ

ತಾ. ೨೧

ಶೇರ ಪೇಟೆಯಲ್ಲಿ ಸರಕಾರದ ಆಧಾರಿತ ನಿಯಂತ್ರಣದ ಬಗ್ಗೆ ಆಶಾಕೋಲಹದಿಂದ ಬೆಲೆಗಳ ಓಟ ನಿಂತು ಕೆಲವು ಪಾಲುಗಳು ಕುಸಿ ಕೆಳಮುಖವಾದವು. ಆದರೆ ಮುಂದೆ ಬೆಲೆಗಳು ಸ್ವಲ್ಪ ಸುಧಾರಿಸಿ ಇಂದು ಇಂತು ಕೊನೆಗೊಂಡವು.

#### ಜವಳಿ

| | |
|---|---|
| ಅಹಮದಾಬಾದ ಅಡ್ವಾನ್ಸ್ | ೫೧೬-೪-೦ |
| ಮುಂಬಯಿ ಡಾಯಿಂಗ್ | ೧೦೪೬-೪-೦ |
| ಸೆಂಟ್ರಲ ಇಂಡಿಯಾ | ೫೮೬-೦-೦ |
| ಗೋಕಾಕ | ೫೧೬-೦-೦ |
| ಕೋಹಿನೂರು | ೫೧೩-೦-೦ |
| ಸ್ವದೇಶಿ | ೩೦೬-೦-೦ |

#### ಇತರ

| | |
|---|---|
| ಬೇಲಾಪುರ ಸಕ್ಕರೆ | ೨೫೬-೦-೦ |
| ಮುಂಬಯಿ ಬರ್ಮಾ | ೩೮೧-೪-೦ |
| ಟಾಟಾ ಸ್ಟೀಲ ಡೆಫರ್ಡ | ೧೫೨೨-೮-೦ |
| ಸಿಂಧ್ಯಾ ಸ್ಟೀಮ | ೨೪-೭-೦ |
| ಅಸೊ. ಸಿಮೆಂಟ್ಸ | ೧೫೭-೦-೦ |
| ಸೆಂಟ್ರಲ ಬ್ಯಾಂಕ | ೯೦-೦-೦ |
| ಇಂಪೀರಿಯಲ್ ಬ್ಯಾಂಕ ಪೂರ್ಣ | ೧೯೦೫-೦-೦ |
| ಇಂಡಿಯನ್ ಬ್ಯಾಂಕ | ೨೨೩-೦-೦ |
| ರಿಝರ್ವ ,, | ೧೦೩-೪-೦ |

### ಚಿನ್ನ--ಬೆಳ್ಳಿ

ತಾ. ೨೧

ಬಿಸಿವಾರ ಪೇಟೆಯಲ್ಲಿ ಬೆಲೆಗಳು ಸ್ವಲ್ಪ ಅಂತರದಲ್ಲಿ ಓಡಾಡುತಿವೆ. ರೈತರು ಚಿನ್ನವನ್ನು ಕೊಳ್ಳುತಿರುವದರಿಂದ ಬೆಲೆಗಳು ಇಳಿಯಲು ಅವಕಾಶವಿಲ್ಲವೆಂದು ಹೇಳಲಾಗಿದೆ. ಇಂದಿನ ಬೆಲೆಗಳು ಹೀಗಿದ್ದವು.

| | |
|---|---|
| ತಯಾರಿ ಚಿನ್ನ | ೧೧೪-೧೩-೦ |
| ವಾಯಿದಾ ,, | ೧೧೩-೧೪-೦ |
| ಸಾವರಿನ | ೭೫-೮-೦ |
| ತಯಾರಿ ಬೆಳ್ಳಿ | ೧೭೪-೧೪-೦ |
| ವಾಯಿದಾ ,, | ೧೭೪-೬-೦ |
| ಡಿಸೆಂಬರ | ೧೭೪-೭-೦ |

### ಅರಳೆ

ತಾ. ೨೧

ಅರಳೀ ಪೇಟೆಯಲ್ಲಿಯೂ ಹೆಚ್ಚಿನ ವ್ಯತ್ಯಾಸಗಳಿಲ್ಲ. ಹೊಸ ಬೆಳೆ ಸ್ವಲ್ಪ ಸ್ವಲ್ಪ ಪೇಟೆಗೆ ಬರುತ್ತ ಇದೆ. ಹೊಸ ಬೆಳೆಯ ಪ್ರಮಾಣ ಮತ್ತು ಪರದೇಶದಿಂದ ಬರಬಹುದಾದ ಹತ್ತಿಯ ಬಗ್ಗೆ ಪರಸ್ಪರ ವಿರುದ್ಧ ತರ್ಕವಿತರ್ಕಗಳು ನಡೆದಿವೆ. ಇಂದಿನ ಬೆಲೆಗಳು ಹೀಗೆ—

| | |
|---|---|
| ಫೆಬ್ರುವರಿ | ೫೯೯-೦-೦ |
| ಮೇ | ೫೮೦-೪-೦ |
| ಜುಲೈ | ೫೯೩-೪-೦ |
| ಸೆಪ್ಟೆಂಬರ | ೫೯೩-೧೨-೦ |

### ಎಣ್ಣೆಕಾಳು

| | |
|---|---|
| ಶೇಂಗಾ | ೧೮೦-೦-೦ |
| ಅಗಸಿ | ೨೭-೬-೦ |
| ,, ಹೊಸ ಬೆಳೆ | ೨೭-೯-೦ |
| ಅಗಸಿ ಎಣ್ಣೆ | ೧೬-೮-೦ |
| ಔಡಲ | ೩೨-೦-೦ |

### ಸಾಂಗಲಿ

ತಾ. ೧೮

| | |
|---|---|
| ಅರಸಿಣ ಹೊಸ (ಹೇರು) | ೧೩೧ |
| ಶೇಂಗಾ ಖಂಡಿ | ೧೩೦ |
| ಮೆಣಸಿನಕಾಯಿ ಹೊಸ ಹೆರು | ೧೭೫ |
| ಬೆಲ್ಲ ,, | ೫೨ |

### ಶಿವಮೊಗ್ಗ ಅಡಿಕೆ

ತಾ. ೨೦

| | |
|---|---|
| ದೇಶಾವರ ನಂ. ೧ ಮಣ ೧ ಕ್ಕೆ | ೨೯-೩೧ |
| ,, ,, ೨ | ೨೭-೨೯ |
| ,, ,, ೩ | ೨೪-೨೬ |
| ತೊರಹಾಲು | ೨೧-೨೭ |
| ರಾಜಾಅಲವು | ೨೪-೨೫ |
| ಬೆಟ್ಟೆಮಂತಿ | ೧೫-೧೮ |
| ಬೆಟ್ಟೆ | ೧೫-೧೭ |

### ಹುಬ್ಬಳ್ಳಿ

ತಾ. ೨೦

| | |
|---|---|
| ಜ. ಹತ್ತಿ ಸಗಳೆ | ೩೭೫-೪೨೫ |
| ,, ಅರಳೆ ,, | ೨೬೫-೨೯೫ |
| ಜೋಳ (ಚೀಲಕ್ಕೆ) | ೩೯-೪೧-೮-೦ |
| ಬಿಳಿ ಗೋದಿ ಚೀಲ | ೪೭-೯೬ |
| ಕೆಂಪು ,, ,, | ೧೦೭-೧೧೨ |
| ಸಣ್ಣಕ್ಕಿ ,, | ೭೦-೮೪ |
| ದೊಡ್ಡಕ್ಕಿ ,, | ೬೭-೬೪ |
| ಕುಸುಬಿ ,, | ೩೧-೩೨-೮-೦ |
| ಶೇಂಗಾ ಹೇರು | ೪೫-೯೯ |
| ,, ಹೊಸ | ೩೬-೪೨ |

ಕರ್ಮವೀರ

ಶ್ರೀಮಚ್ಚಾಲುಕ್ಯ ವಿಕ್ರಮ ವರ್ಷ ೮೭೨
ಆಶ್ವಿನ ಬ|| ೭ ಸೋಮವಾರ

# ಭಾಷಾನ್ವಯ ಪ್ರಾಂತಗಳು

ಹಿಂದುಸ್ಥಾನ ಘಟನಾ ಸಮಿತಿಯ ಅಧ್ಯಕ್ಷರಿಂದ ನೇಮಕವಾದ ಧಾರ ಸಮಿತಿಯು ಇದೇ ೨೭ ಮತ್ತು ೨೮ ಕ್ಕೆ ಹುಬ್ಬಳ್ಳಿಗೆ ಬರಲಿದೆ. ಆ ಸಮಿತಿಗೆ ಬೇರೆಬೇರೆ ಸಂಘಸಂಸ್ಥೆಗಳ ಪರವಾಗಿ ಮನವಿಗಳು ಸಮರ್ಪಿಸಲ್ಪಟ್ಟು ಕರ್ನಾಟಕ ಪ್ರಾಂತ ನಿರ್ಮಾಣದ ಅವಶ್ಯಕತೆಯನ್ನು ಮನದಟ್ಟು ಮಾಡಿಕೊಡಬೇಕಾಗಿದೆ. ಸಮಿತಿಯವರು ಈಗಾಗಲೆ ಮಂಗಳೂರು ಮದ್ರಾಸಗಳಲ್ಲಿ ಕರ್ನಾಟಕ ಪರವಾಗಿ ಮನವಿಗಳನ್ನು ಸ್ವೀಕರಿಸಿದ್ದುಂಟು. ಈ ಕೆಲಸಕ್ಕಾಗಿ ಹುಬ್ಬಳ್ಳಿಯಲ್ಲಿ ಸತ್ಕಾರ ಸಮಿತಿಯೊಂದು ಸ್ಥಾಪಿತವಾಗಿದೆ. ಅದರ ಉಪಸಮಿತಿಯು ಧಾರ ಸಮಿತಿಗೆ ಒಪ್ಪಿಸತಕ್ಕ ಮನವಿಯನ್ನು ಸಿದ್ಧಪಡಿಸುತಲಿದೆ. ಕರ್ನಾಟಕಸ್ಥರು ಒಳ್ಳೇ ಶಿಸ್ತಿನಿಂದ ಸಾಧಾರವಾಗಿ ಕರ್ನಾಟಕ ಪ್ರಾಂತ ನಿರ್ಮಾಣದ ಅವಶ್ಯಕತೆಯನ್ನು ಸಿದ್ಧಮಾಡಿ ಕೊಡಬೇಕಲ್ಲದೆ ಕೂಡಲೆ ಅದನ್ನು ರಚಿಸುವದರಿಂದಾಗುವ ಲಾಭವನ್ನೂ ತೋರಿಸಿಕೊಡಬೇಕು.

ಕಾಂಗ್ರೆಸ್ಸು ಭಾಷಾನ್ವಯ ಪ್ರಾಂತ ರಚನೆಯ ತತ್ವವನ್ನು ಒಪ್ಪಿಕೊಂಡಿದ್ದರೂ ಸದ್ಯದಲ್ಲಿ ಭಾಷಾನ್ವಯ ಪ್ರಾಂತಗಳ ರಚನೆ ಬೇಡ, ಅನೇಕ ಮಹತ್ವದ ಸಮಸ್ಯೆಗಳನ್ನು ಮೊದಲು ಬಿಡಿಸುವಾ ಎಂಬುದೊಂದು ವಾದ. ಭಾಷಾನ್ವಯ ಪ್ರಾಂತ ರಚನೆಯಿಂದ ಪ್ರಾಂತೀಯತೆಯ ಭಾವನೆ ಬಲಿತು ಇಡೀ ರಾಷ್ಟ್ರದ ಏಕಮತ್ಯಕ್ಕೆ ಬಾಧೆ ಬರುವದೆಂಬುದು ಮತ್ತೊಂದು ವಾದ. ಗಡಿನಿರ್ಣಯದ ಸಂಬಂಧದಲ್ಲಿ ಪ್ರಾಂತ ಪ್ರಾಂತಗಳಲ್ಲಿ ಕಿಕ್ಕಾಟವೆದ್ದು ರಕ್ತಪಾತದ ಭೀತಿಯು ಇದೆಂಬುದು ಇನ್ನೊಂದು ವಾದ. ಆದರೆ ನಿರ್ವಿಕಾರ ಮನಸ್ಸಿನಿಂದ ಮತ್ತು ಪೂರ್ವಗ್ರಹದೂಷಿತರಾಗದೆ ವಿಚಾರ ಮಾಡಿದಲ್ಲಿ ಇವೆಲ್ಲ ವಾದಗಳು ನಿಲ್ಲಲಾರವೆಂದು ಕಂಡುಬರದಿರದು. ಭಾಷಾನ್ವಯ ಪ್ರಾಂತ ರಚನೆಯು ಇಡೀ ರಾಷ್ಟ್ರದ ಸಾರ್ವಾಂಗಿಕ ಅಭಿವೃದ್ಧಿಗೆ ಸಹಾಯಕವಾಗುವದೆಂದು ಈ ಮೊದಲು ಕಾಂಗ್ರೆಸ್ಸು ಮತ್ತು ಸರಕಾರ ಒಪ್ಪಿವೆ. ಹಿಂದುಸ್ಥಾನವೀಗ ಮಹತ್ವದ ಪ್ರಶ್ನೆಗಳನ್ನು ಬಿಡಿಸಬೇಕಾಗಿದೆಂಬುದು ಒಪ್ಪತಕ್ಕ ಮಾತು. ಆದರೆ ಈ ಸಮಸ್ಯೆ ಬಿಡಿಸುವಲ್ಲಿ ಭಾಷಾನ್ವಯ ಪ್ರಾಂತಗಳು ಅದೆಂತು ಅಡ್ಡ ಬರುವವೋ ತಿಳಿಯದಾಗಿದೆ. ತದ್ವಿರುದ್ಧವಾಗಿ ಒಂದೇ ಆಡಳತೆಯಲ್ಲಿ ಬಂದ ಆಯಾ ಭಾಷಾನ್ವಯ ಪ್ರಾಂತಗಳಲ್ಲಿಯ ಜನರು ಹೆಚ್ಚು ಉತ್ಸಾಹದಿಂದ ಹುಮ್ಮಸದಿಂದ ಸರಕಾರಕ್ಕೆ ಹಾರ್ದಿಕ ಸಹಾಯ ಸಹಕಾರವನ್ನು ಸಲ್ಲಿಸುವರೆಂಬಲ್ಲಿ ಸಂದೇಹವಿಲ್ಲ. ಮೊನ್ನೆ ಮೊನ್ನಿನ ವರೆಗೆ ಭಾಷಾನ್ವಯ ಪ್ರಾಂತ ರಚನೆಯಲ್ಲಿ ಅನಾಸ್ಥೆ ತಾಳಿದ್ದ ಡಾ. ಅಂಬೇಡಕರರು ಕೂಡ, ಭಾಷಾನ್ವಯ ಪ್ರಾಂತರಚನೆಯೆಂದರೆ ಸ್ವತಂತ್ರ ಸಾರ್ವಭೌಮ ರಾಷ್ಟ್ರನಿರ್ಮಾಣವೇನೂ ಅಲ್ಲ. ಅದರಿಂದ ಅಕಲ್ಪಿತ ತೊಂದರೆಗಳೇನೂ ಉಂಟಾಗಲಾರವು. ಸಮ್ಮಿಶ್ರಪ್ರಾಂತಗಳಿಗಿಂತ ಭಾಷಾನ್ವಯ ಪ್ರಾಂತಗಳೇ ಪ್ರಜಾಪ್ರಭುತ್ವಕ್ಕೆ ಹೆಚ್ಚು ಅನುಕೂಲವಾಗುವವು ಎಂದು ಮುಂತಾಗಿ ಅಭಿಪ್ರಾಯಪಟ್ಟಿರುವರು ಸರಕಾರದ ಮುಂದಿರುವ ಮಹತ್ವದ ಸಮಸ್ಯೆಗಳ ಪರಿಹಾರಕ್ಕೆ ಭಾಷಾನ್ವಯ ಪ್ರಾಂತಗಳಿಂದ ಯಾವಬಗೆಯಿಂದಲೂ ಅಡ್ಡಿ ಅಡಚಣಿಗಳುಂಟಾಗಲಾರವು. ಗಡಿ ನಿರ್ಣಯದಲ್ಲಿ ಅನಪೇಕ್ಷಿತ ಕಿಕ್ಕಾಟವೇಳುವದೆಂದು ಹೇಳಲಾಗುತ್ತಿದೆ. ಆದರೆ ಈ ಸಂದರ್ಭದಲ್ಲಿ ಮಹಾತ್ಮಾ ಗಾಂಧಿಯವರು ನಮಗೆ ಯೋಗ್ಯ ಮಾರ್ಗದರ್ಶನ ಮಾಡಿಕೊಟ್ಟಿದ್ದಾರೆ. ಆಯಾ ಪ್ರಾಂತೀಯ ಧುರೀಣರು ತಮ್ಮ ತಮ್ಮೊಳಗೆ ಈ ಪ್ರಶ್ನೆಯನ್ನು ಬಗೆಹರಿಸಿಕೊಳ್ಳಬೇಕು. ಒಂದು ವೇಳೆ ಬಗೆಹರಿಯದಿದ್ದರೆ ನಿಷ್ಪಕ್ಷಪಾತ ತ್ರಯಸ್ಥ ಮಂಡಳಕ್ಕೊಪ್ಪಿಸಬೇಕು ಎಂದು ಅವರು ಹೇಳಿರುವರು. ಇದು ಮಹತ್ವದ ಸಲಹೆಯಾಗಿದೆ. ಅಲ್ಲದೆ ಸದ್ಯಕ್ಕೆ ಈ ಗಡಿಯ ಪ್ರಶ್ನೆಯನ್ನೇ ಎತ್ತುವದು ಬೇಡ. ಈಗ ಕಾಂಗ್ರೆಸ ಪ್ರಾಂತಗಳಲ್ಲಿದ್ದ ಗಡಿಗಳನ್ನೇ ಈ ಭಾಷಾನ್ವಯ ಪ್ರಾಂತಗಳ ಗಡಿಗಳೆಂದು ಗೊತ್ತುಪಡಿಸತಕ್ಕದ್ದು. ಮುಂದೆ ವಾತಾವರಣವು ತಿಳಿಯಾಗಿ ಪರಸ್ಪರರಲ್ಲಿ ಸೌಹಾರ್ದಭಾವನೆ ಬೆಳೆದ ಬಳಿಕ ಗಡಿ ಸಮಸ್ಯೆಯನ್ನು ಬಗೆಹರಿಸಬಹುದು ಎಂದು ಅವರು ಸೂಚಿಸಿರುವರು. ಅನೇಕ ಧುರೀಣರೂ ಇದಕ್ಕೆ ಒಪ್ಪುವರು. ಆದುದರಿಂದ ಗಡಿ ನಿರ್ಣಯದಲ್ಲ ರಕ್ತಪಾತವಾಗುವದೆಂಬ ಹೆದರಿಕೆಗೆ ಅವಕಾಶವಲ್ಲ. ಮನಸ್ಸಿದ್ದರೆ ಎಲ್ಲವೂ ಕಾರ್ಯರೂಪದಲ್ಲಿ ಬರಬಹುದು. ಅಡ್ಡಿ ಅಡಚಣಿಗಳೆಲ್ಲ ಮಾಯವಾಗುವವೆಂಬುದು ಸ್ಪಷ್ಟವಾದುದು.



ಮುಂಬಯಿ 'ಸಂಯುಕ್ತ ಕರ್ನಾಟಕ' ಸಂಘದ ಆಶ್ರಯದಲ್ಲಿ ಜರುಗಿದ ನಾಡಹಬ್ಬ ಸಮಾರಂಭದಲ್ಲಿ ತೆಗೆದ ಚಿತ್ರ. ಮೊದಲನೆಯ ಸಾಲು (ಎಡದಿಂದ ಬಲಕ್ಕೆ) ಶ್ರೀ ಬೆಳವಿ, ಶ್ರೀ ಗೋಪಿ, ನ್ಯಾ. ಮೂ. ಜಾಹಗಿರದಾರ (ಅಧ್ಯಕ್ಷ) ಶ್ರೀ ಎಸ್. ಎನ್. ಅಂಗಡಿ (ಮುಖ್ಯ ಅತಿಥಿಗಳು) ಶ್ರೀ ಎಮ್. ವ್ಹಿ. ನಾಯಕ, ಶ್ರೀ ಕೆ. ಎನ್. ಗಾಯತೊಂಡೆ. ಎರಡನೆಯ ಸಾಲು ಶ್ರೀ ಕೇಶವಮೂರ್ತಿ (ಸಂಯುಕ್ತ ಕಾರ್ಯದರ್ಶಿ) ಶ್ರೀ ಎಚ್. ಎಸ್. ಪಾಟೀಲ, ಶ್ರೀ ವರದರಾಜ ಆದ್ಯ (ಪ್ರಧಾನ ಕಾರ್ಯದರ್ಶಿ) ಶ್ರೀ ಕೋಟಿಯಾನ್ ಮತ್ತು ಶ್ರೀ ಕೆ. ಡಿ. ಮುಲ್ಕಿ.

# ವಾರದ ಸಿಂಹಾವಲೋಕನ

## ಮೈಸೂರಿನ ಪಾತ್ರವು

ಭಾಷಾನ್ವಯ ಪ್ರಾಂತರಚನೆಯಲ್ಲಿ ಮೈಸೂರು ಮಹತ್ವದ ಪಾತ್ರವನ್ನು ವಹಿಸಬೇಕಾಗಿದೆ. ಮೈಸೂರು ಕರ್ನಾಟಕದ ಪ್ರಮುಖ ಭಾಗವು. ಮೈಸೂರು ಮಹಾರಾಜರು ಕರ್ನಾಟಕ ಸಿಂಹಾಸನಾಧೀಶ್ವರರೆಂದು ಹೊಗಳಿಸಿಕೊಳ್ಳುವುದುಂಟು. ಕಳೆದ ಕಾಲುಶತಮಾನದಿಂದ ಮೈಸೂರಿನೊಡನಿದ್ದ ಸಂಬಂಧವು ಸಾಹಿತ್ಯ ಪರಿಷತ್ತಿನ ಮೂಲಕ ಮತ್ತು ಕಾಂಗ್ರೆಸ ಚಟುವಟಿಕೆಗಳ ಮೂಲಕ ಮತ್ತಷ್ಟು ದೃಢವಾಗಿದೆ. ಕಾಂಗ್ರೆಸ್ಸಿನ ಸ್ವಾತಂತ್ರ್ಯ ಚಳವಳಿಯಲ್ಲಿ ಮೈಸೂರೂ ಮೈಸೂರಿನ ಹೊಣೆಗಾರ ರಾಜ್ಯಸ್ಥಾಪನೆಯ ಹೋರಾಟದಲ್ಲಿ ಮೈಸೂರೇತರ ಕರ್ನಾಟಕವೂ ಹೆಗಲಿಗೆ ಹೆಗಲು ಹಚ್ಚಿ ಹೋರಾಡಿದ್ದುಂಟು. ಅಖಂಡ ಕರ್ನಾಟಕ ಪ್ರಾಂತನಿರ್ಮಾಣಕ್ಕಾಗಿಯೂ ಎರಡೂ ಭಾಗದವರು ಪ್ರಯತ್ನಿಸಿದ್ದುಂಟು. ಮೊನ್ನೆ ಮೊನ್ನಿನ ವರೆಗೆ ಅಂದರೆ ೧೯೪೭ ರಲ್ಲಿ ದಾವಣಗೇರಿಯಲ್ಲಿ ಕೂಡಿದ್ದ ಕರ್ನಾಟಕ ಮಹಾಪರಿಷತ್ತಿನ ವರೆಗೆ ಮೈಸೂರಿನ ಮಹಾಜನರು ಕರ್ನಾಟಕದಲ್ಲಿ ಸೇರಲು ಸಿದ್ಧರಿದ್ದರು ಆದರೆ ಮೈಸೂರಲ್ಲಿ ಹೊಣೆಗಾರ ಸರಕಾರ ಸ್ಥಾಪಿತವಾದಂದಿನಿಂದ ಮಾತ್ರ ಈ ಅಪಸ್ವರವು ಕೇಳಬರುತ್ತದೆ. ಮೈಸೂರಿನ ಹಲವು ಮುಖಂಡರು ಪ್ರತ್ಯೇಕತಾಭಾವನೆಯನ್ನು ತಾಳಿರುವರು. ಆದರೆ ಜನಸಮಾನ್ಯರು ಮಾತ್ರ ಧುರೀಣರ ಈ ಅಭಿಪ್ರಾಯಕ್ಕೊಪ್ಪುವುದಿಲ್ಲೆಂದು ಹೇಳಲಾಗುತ್ತದೆ. ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಶ್ರೀ ತಾತಾಚಾರ್ಯ ಶರ್ಮರು ಮಂಗಳೂರಿನಲ್ಲಿ ಭಾಷಣ ಮಾಡುತ್ತ ಮೈಸೂರನ್ನೊಳಗೊಂಡ ಅಖಂಡ ಕರ್ನಾಟಕ ಪ್ರಾಂತರಚನೆಯನ್ನೆ ಪ್ರತಿಪಾದಿಸಿರುವರು. ಕಾಂಗ್ರೆಸ ಧುರೀಣರಲ್ಲಿಯೂ ಅನೇಕರು ಇದೇ ಬಗೆಯ ಭಾವನೆಯವರಾಗಿರುವರು ಈ ಪರಿಸ್ಥಿತಿಯಲ್ಲಿ ಅಖಂಡ ಕರ್ನಾಟಕ ಪ್ರಾಂತ್ಯನಿರ್ಮಾಣ ವಿರೋಧಕರು ಈ ಸಮಸ್ಯೆಯನ್ನು ನಿರ್ವಿಕಾರ ಮತ್ತು ನಿಃಸ್ವಾರ್ಥ ದೃಷ್ಟಿಯಿಂದ ವಿಚಾರಿಸಿ ತಮ್ಮ ಸದ್ಯದ ಘಾತಕ ಧೋರಣವನ್ನು ಬದಲಿಸಬೇಕೆಂದು ಕೇಳಿಕೊಳ್ಳುತ್ತೇವೆ. ಸದ್ಯದ ಸಮಯದಲ್ಲಿ ಯಾವದೇ ಕಾರಣದಿಂದ ಅವರು ಇದಕ್ಕೆ ವಿರೋಧವಾಗಿ ವರ್ತಿಸಿದರೆ ಮಾತೃದ್ರೋಹಮಾಡಿದ ಪಾಪಕ್ಕೆ ಗುರಿಯಾಗುವರೆಂದು ಹೇಳದೆ ಗತ್ಯಂತರ ಉಳಿಯದು.

## ಅನುಚಿತ ಸಲಹೆ

ರೇಲ್ವೆ ಮಹಾಮಂಡಳದ ಧುರೀಣರಾದ ಶ್ರೀ ಜಯಪ್ರಕಾಶ ನಾರಾಯಣರು ಇದೀಗ ರೇಲ್ವೆ ಕೆಲಸಗಾರರಿಗೆ ಸಂಪು ಹೂಡುವ ಸಿದ್ಧತೆಯಲ್ಲಿರಬೇಕೆಂದು ಸಲಹೆ ಕೊಡುತಿರುವದು ಅತ್ಯಂತ ಅನುಚಿತ ಮತ್ತು ಘಾತಕವಾದುದು. ಸಂಪು ಮುಂತಾದ್ದನ್ನು ಹೂಡಬಾರದೆಂದು ಕೆಲ ದಿನಗಳ ಹಿಂದೆಯೇ ಸಲಹೆಯಿತ್ತ ಪ್ರಕಾಶರು ಇದೀಗ ತದ್ವಿರುದ್ಧ ಸಲಹೆ ಕೊಡುವುದಕ್ಕೆ ಹೈದರಾಬಾದ ಸಮಸ್ಯಾಪರಿಹಾರವೇ ಕಾರಣವಂತೆ. ಹೈದರಾಬಾದ ಸಮಸ್ಯೆಯೊಂದು ಬಗೆಹರಿದರೆ ಇಡೀ ರಾಷ್ಟ್ರದ ಎಲ್ಲ ಸಮಸ್ಯೆಗಳ ಪರಿಹಾರವಾದಂತಾಯಿತೆಂದು ಶ್ರೀ ಜಯಪ್ರಕಾಶರು ಭಾವಿಸಿದ್ದು ಸರ್ವಥಾ ಸರಿಯಾಗಲಾರದು. ಕಾಶ್ಮೀರ ಸಮಸ್ಯೆ, ಆರ್ಥಿಕ ದುಃಸ್ಥಿತಿ ಇನ್ನೂ ಹಿಂದುಸ್ಥಾನ ಸರಕಾರದ ತಲೆತಿನ್ನುತಿವೆ. ಇದಲ್ಲದೆ ಉತ್ಪಾದನೆಯನ್ನು ಎಲ್ಲ ಬಗೆಯಿಂದಲೂ ಹೆಚ್ಚಿಸಿ ದೇಶವನ್ನು ಸ್ವಾವಲಂಬಿಯನ್ನಾಗಿ ಮಾಡಬೇಕಾಗಿದೆ. ಈ ಸಮಯದಲ್ಲಿ ದೇಶದ ಉತ್ಪಾದನೆಯಲ್ಲಿ ಹೆಚ್ಚಿನ ಪಾತ್ರ ವಹಿಸಬೇಕಾಗಿರುವ ರೇಲ್ವೆ ಕೆಲಸಗಾರರೆ ಸಂಪು ಹೂಡಿದರೆ ಅತ್ಯಂತ ವಿಪರೀತ ಪರಿಸ್ಥಿತಿ ಬರುವದು. ಆದುದರಿಂದ ರೇಲ್ವೆ ಕೆಲಸಗಾರರು ಸಂಪಿನಂಥ ಘಾತಕ ವಿಚಾರವನ್ನು ಬಿಟ್ಟುಬಿಡುವದು ಉಚಿತವಾದುದು. ಇದರಿಂದ ರೇಲ್ವೆ ಕೆಲಸಗಾರರ ಬೇಡಿಕೆಗಳನ್ನು ಸರಕಾರವು ಮನ್ನಿಸಬಾರದೆಂದು ನಾವು ಹೇಳಿದಂತಾಗದು ಸರಕಾರದವರು ರೇಲ್ವೆ ಕೆಲಸಗಾರರ ನ್ಯಾಯ್ಯವಾದ ಬೇಡಿಕೆಗಳನ್ನು ಪೂರಯಿಸುವ ಉಪಾಯಗಳನ್ನು ಕೂಡಲೆ ಕೈಕೊಳ್ಳಬೇಕು. ತಮ್ಮ ಪ್ರತಿನಿಧಿಗಳಿಂದಲೆ ರಚಿತವಾದ ಸರಕಾರವು ಸದ್ಯದಲ್ಲಿ ಆಡಳತೆ ನಡೆಸುತಿರುವಾಗ ಸಣ್ಣಪುಟ್ಟ ಬೇಡಿಕೆಗಳಿಗಾಗಿ, ಸಂಪಿನಂಥ ಕೊನೆಯ ಅಸ್ತ್ರವನ್ನು ಉಪಯೋಗಿಸಿ, ಅದನ್ನು ಪೇಚಿನಲ್ಲಿ ತರುವದು ಸಮಂಜಸವಾಗಲಾರದು. ಇದೆಲ್ಲವನ್ನು ವಿಚಾರಿಸಿ ರೇಲ್ವೆ ಕೆಲಸಗಾರರು ಸಮಂಜಸವಾದ ರಾಷ್ಟ್ರದಭಿವೃದ್ಧಿಗೆ ಅನುಕೂಲವಾಗುವ ಧೋರಣವನ್ನೇ ವಹಿಸಬೇಕೆಂದು ಮತ್ತೊಮ್ಮೆ ಬಿನ್ನವಿಸುತ್ತೇವೆ.

## ಸೂಚನೆ

ವಾಡಿಕೆಯಂತೆ ದೀಪಾವಳಿಯ ನಿಮಿತ್ತ ೧-೧೧-೪೮ ರ ಪತ್ರಿಕೆಯು ಹೊರಡುವುದಿಲ್ಲ. ಆದರೆ ದೀಪಾವಳಿ ಸಂಚಿಕೆಯು ಅಂದೇ ಗ್ರಾಹಕರೆಲ್ಲರ ಕೈಸೇರುವ ವ್ಯವಸ್ಥೆ ಮಾಡಿದೆ.

ವ್ಯವಸ್ಥಾಪಕ
ಕರ್ಮವೀರ

## ದಿ. ಹಾರ್ನಿಮನ್-ನರೀಮಾನ

ಆಚೆ ವಾರ ಎರಡು ಪ್ರಮುಖ ವ್ಯಕ್ತಿಗಳು ಕಣ್ಮರೆಯಾಗಿ ಹಿಂದುಸ್ಥಾನದ ಪತ್ರಿಕಾ ಪ್ರಪಂಚವು ಮತ್ತು ರಾಜಕೀಯ ರಂಗವು ಬಡವಾಯಿತು. ಪ್ರಸಿದ್ಧ ಪತ್ರಿಕೋದ್ಯಮಿಗಳಾಗಿದ್ದ ಬೆಂಜಾಮಿನ್ ಹಾರ್ನಿಮನ್‌ರು ವಯಸ್ಸಿನ ೭೫ ನೇ ವರುಷದಲ್ಲಿ ಮುಂಬಯಿಯಲ್ಲಿ ಕ್ರಿಸ್ತವಾಸಿಗಳಾದರು. ಹಿಂದುಸ್ಥಾನವು ಇನ್ನೂ ಪತ್ರಿಕಾ ವ್ಯವಸಾಯದಲ್ಲಿ ಹಿಂದೆ ಇದ್ದವಾಗ ಹಾರ್ನಿಮನ್‌ರು ಅದರಲ್ಲಿ ಬಿದ್ದು ಅಖಂಡ ಐವತ್ತು ವರುಷಗಳ ವರೆಗೆ ಅತ್ಯಂತ ನಿರ್ಭಯದಿಂದ ಅದನ್ನು ನಡೆಸಿಕೊಂಡು ಬಂದು ಅದರ ಮಟ್ಟವನ್ನು ಏರಿಸಿದರು. ಸ್ವತಃ ಆಳುವ ರಾಷ್ಟ್ರದವರಾಗಿದ್ದರೂ ದಾಸ್ಯದಲ್ಲಿ ತೊಳಲುತಿದ್ದ ಭಾರತೀಯರಲ್ಲಿ ಮುಂಬಯಿ ಕ್ರಾನಿಕಲ್‌ದ ಮುಖಾಂತರ ರಾಷ್ಟ್ರೀಯತ್ವದ ಅರಿವನ್ನುಂಟು ಮಾಡಿ ಹಿಂದ ಸ್ವಾತಂತ್ರ್ಯ ಚಳವಳಿಗೆ ಬಹು ಮಟ್ಟಿಗೆ ನೆರವಾದರು. ಹಾರ್ನಿಮನ್‌ರ ಈ ರಾಷ್ಟ್ರೀಯ ವೃತ್ತಿಯು ಬ್ರಿಟಿಶ ಸರಕಾರಕ್ಕೆ ಸರಿಬಾರದ್ದರಿಂದ ಅವರನ್ನು ಹಿಂದುಸ್ಥಾನದಿಂದ ಹೊರಗಟ್ಟಿದರು. ಇಂಥ ಕಠಿನ ಪ್ರಸಂಗದಲ್ಲಿಯೂ ಅವರು ಎದೆಗುಂದದೆ ತಮ್ಮ ವ್ಯವಸಾಯವನ್ನು ನಡೆಸಿಕೊಂಡು ಬಂದರು. ಪತ್ರಿಕಾ ವ್ಯವಸಾಯದಲ್ಲಿ ಬೀಳಬೇಕೆನ್ನುವ ತರುಣರು ಹಾರ್ನಿಮನ್‌ರ ಉಜ್ವಲ ಆದರ್ಶವನ್ನು ಮುಂದಿಟ್ಟುಕೊಳ್ಳಬಹುದಾಗಿದೆ. ಇಂಥ ಹಿರಿಯ ಪತ್ರಿಕೋದ್ಯಮಿಯು ಕಾಲಾಧೀನರಾದುದು ತುಂಬಿ ಬರಲಾರದ ಹಾನಿಯು. ವೀರ ನರೀಮಾನರು ಮುಂಬಯಿ ಪ್ರಾಂತದ ಪ್ರಮುಖ ಕಾಂಗ್ರೆಸ ಕಾರ್ಯಕರ್ತರಲ್ಲಿ ಒಬ್ಬರು. ಇವರ ಹೆಸರನ್ನು ಕೇಳದಿದ್ದ ಭಾರತೀಯನು ವಿರಳವೆಂದು ಹೇಳಬಹುದು. ಮುಂಬಯಿ ಪ್ರಾಂತದವರಿಗಂತೂ ಅವರು ಚಿರ ಪರಿಚಿತರು. ಹಿಂದುಸ್ಥಾನವು ಹೂಡಿದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ನರೀಮಾನರು ಉಜ್ವಲ ಭಾಗವನ್ನು ವಹಿಸಿ ಅನೇಕ ಸಲ ಆಳರಸರ ದಬ್ಬಾಳಿಕೆಗೆ ತುತ್ತಾಗಬೇಕಾಯಿತು. ತಮ್ಮ ಅತ್ಯಂತಿಕ ರಾಷ್ಟ್ರನಿಷ್ಠೆ ಸ್ವಾರ್ಥತ್ಯಾಗ, ವಾಗ್ಮಿತ್ವ ಗುಣಗಳಿಂದ ತರುಣರಿಗೆಲ್ಲ ಅವರು ಒಳ್ಳೆ ಆದರ್ಶರಾಗಿದ್ದರು. ಮುಂಬಯಿ ತರುಣರಲ್ಲಿ ಜಾಗ್ರತೆಯನ್ನುಂಟು ಮಾಡಿ ದೇಶ ಸೇವೆಗೆ ಅವರನ್ನು ಅಣಿಗೊಳಿಸುವಲ್ಲಿ ನರೀಮಾನರು ಬಹು ಮುಖ್ಯವಾದ ಪಾತ್ರವನ್ನು ವಹಿಸಿದ್ದುಂಟು. ಅಂತೆಯೇ ತರುಣರ ಮುಖಂಡರೆಂದು ಅವರು ಕೀರ್ತಿ ಗಳಿಸಿದ್ದರು. ಮುಂಬಯಿನಗರಾಭಿವೃದ್ಧಿ ಯೋಜನೆಯಲ್ಲಿಯ ಲಂಚಗುಳಿತನವನ್ನು ಹೊರಗೆಡುಹಿ ಉಚ್ಚಾಧಿಕಾರಿಗಳನ್ನೂ ಬಯಲಿಗೆಳೆದರು. ಒಳ್ಳೆ ನುರಿತ ವಕೀಲರೆಂದೂ ಅವರು ಪ್ರಸಿದ್ಧರು. ವಕೀಲರೆಂದು, ವಿಜಾಪುರ ತುರಂಗದಲ್ಲಿಯ ಸತ್ಯಾಗ್ರಹಿ ಕೈದಿಗಳೆಂದು, ಮಂಗಳೂರು ಪರಿಷತ್ತಿನ ಅಧ್ಯಕ್ಷರೆಂದು ಅವರು ಕನ್ನಡಿಗರಿಗೆ ಪರಿಚಿತರಿದ್ದರು. ಇವರ ನಿಧನದಿಂದ ಪ್ರಮುಖ ಕಾರ್ಯಕರ್ತರೊಬ್ಬರಿಲ್ಲದಂತಾಯಿತು. ಪರಮಾತ್ಮನು ಇವರಿಬ್ಬರಿಗೂ ಶಾಂತಿಯನ್ನೀಯಲಿ.

# ನಿಯಂತ್ರಣಗಳು

ಶ್ರೀ ಸಂತಬಾಲ ಎಂಬ ಜೈನ ಸಾಧುಗಳು ತಮ್ಮ ಇಡಿ ಬಾಳನ್ನು ಅಹಮದಾಬಾದ ಜಿಲ್ಹೆಯ ಹಿಂದುಳಿದ ವರ್ಗದವರಲ್ಲಿ ರಚನಾತ್ಮಕ ಕಾರ್ಯಕ್ರಮಗಳನ್ನು ಮಾಡುವುದರಲ್ಲಿ ವಿನಿಯೋಗಿಸಿದರು. ಗುಜರಾತಿನ ಕೆಲಸಗಾರರಿಗೆ ಬರೆದ ಒಂದು ಪರಿಪತ್ರದಲ್ಲಿ ಅವರು ಹೀಗೆ ಹೇಳಿದ್ದಾರೆ:

“ಅತಿಪ್ರಸರಣ, ಅತಿ ಮೂಲ್ಯಗಳನ್ನು ತಡೆಗಟ್ಟಲು ಮತ್ತೆ ನಿಯಂತ್ರಣವನ್ನು ಹೇರಲಿರುವರೆಂದು ಸುದ್ದಿ. ನಿಯಂತ್ರಣದ ದೆಸೆಯಿಂದ ಜನರ ನೀತಿ ಬಹಳ ಹದಗೆಟ್ಟದ್ದನ್ನು ಹಿಂದಿನ ನಿಯಂತ್ರಣದ ಅನುಭವ ತೋರಿಸಿ ಕೊಟ್ಟಿದೆ.

“ಗಾಂಧಿಯರ ಭಗೀರಥ ಪ್ರಯತ್ನ ಅದರ ಉಪಸಂಹಾರಕ್ಕೆ ಕಾರಣವಾಯಿತು, ಆದರೆ ನಿರೀಕ್ಷಿಸಿದ ಹಿತಕರ ಪರಿಣಾಮ ಅದರಿಂದಾಗಲಿಲ್ಲ. ಅನಂತರ ಕೆಲವೆಡೆ ಮಹಾಪೂರ, ಕೆಲವೆಡೆ ಕ್ಷಾಮಮುಂತಾದವುಗಳು ಸಮಸ್ಯೆಯನ್ನು ಮತ್ತಷ್ಟು ಬಿಗಿಮಾಡಿದವು. ಬಟ್ಟೆಯ ವಿಷಯದಲ್ಲಿ ವ್ಯಾಪಾರಿಗಳು ಪ್ರಾಮಾಣಿಕತೆಯಿಂದ ನಡೆದುಕೊಳ್ಳಲಿಲ್ಲ. ಇನ್ನು ಅನ್ನವನ್ನು ನಿಯಂತ್ರಿಸುವರು. ಹೀಗೆ ನಾವು ಹಳೆಯ ಪರಿಸ್ಥಿತಿಗೆ ಇಳಿದು ಬಿಡುವೆವು.

“ನಮಗೆ (ಹಳ್ಳಿಯ ಕೆಲಸಗಾರರಿಗೆ) ಒಕ್ಕಲಿನದೇ ಮೂಲಭೂತ ಪ್ರಶ್ನೆ. ಅನ್ನದ ಮೇಲೆ ನಿಯಂತ್ರಣ ಹೇರುವ ಮೊದಲು ಆ ಪ್ರಶ್ನೆಯನ್ನು ಚೆನ್ನಾಗಿ ವಿವೇಚಿಸಬೇಕು. ನಿಯಂತ್ರಣ ಅನಿವಾರ್ಯವೆನಿಸಿದರೆ, ಒಕ್ಕಲಿಗೆ ಅದರೊಡನೆ ಸಹಕರಿಸುವ ಮನಸ್ಸು ಹುಟ್ಟುವಂತೆ ಅದನ್ನು ತರಬೇಕು.

“ಕೆಳಗಿನ ಎರಡು ವಿಕಲ್ಪಗಳು ಆಚರಣೀಯವಾಗಿವೆ. —

“(೧) ಸರಕಾರವು ಒಂದು ರಚನಾತ್ಮಕ ಕೆಲಸಗಾರರ ಸಮಿತಿಗೆ ಇಡಿ ವ್ಯವಸ್ಥಾಪನ ಕಾರ್ಯವನ್ನು ವಹಿಸಿಕೊಟ್ಟು ಅದಕ್ಕೆ ತಾನು ತನ್ನ ಸಂಪೂರ್ಣ ಸಹಕಾರವನ್ನು ನೀಡಬೇಕು. ಅಂದರೆ ಆ ಸಮಿತಿಗೆ ಅದು ಪ್ರಾಂತಕ್ಕೆ ಹೊರಗಿಂದ ತರಿಸುವ ಎಲ್ಲ ಅನ್ನ ಸಾಮಗ್ರಿಗಳನ್ನು ಕೊಟ್ಟು, ಬಟ್ಟೆ, ಕಬ್ಬಿಣ ಮತ್ತು ಇತರ ಮೂಲಭೂತ ಅವಶ್ಯಕ ಪದಾರ್ಥಗಳನ್ನು ಈ ಸಮಿತಿಯ ಮೂಲಕವೇ ಒಕ್ಕಲಿಗೆ ಪೂರಯಿಸಬೇಕು. ನಿಷ್ಕೃಷ್ಟ ಬೆಲೆಗೆ ಬೇಕಾದ ಪದಾರ್ಥಗಳು ಒಕ್ಕಲಿಗೆ ಸಿಗುವಂತೆ ಮಾಡಿದರೆ ನಿಷ್ಕೃಷ್ಟ ಬೆಲೆಗೆ ತನ್ನ ಕಾಳುಕಡ್ಡಿಗಳನ್ನು ನೂರುವಂತೆ ಅವನನ್ನು ಮನವೊಲಿಸಬಹುದು. ಸರಕಾರವು ವ್ಯವಸ್ಥೆಗೊಳಿಸುವ ಕಾರ್ಯದಲ್ಲಿ ಸಂಪೂರ್ಣ ಸಹಕಾರ ನೀಡಲಿರುವುದರಿಂದ ಕೆಲಸ ಸರಾಗವಾಗಿ ನಡೆಯಬಹುದಾಗಿದೆ.

(೨) ಮತ್ತೊಂದು ಬಗೆಯೆಂದರೆ, ಪ್ರತಿಯೊಂದು ಜಿಲ್ಹೆಯಲ್ಲೂ ಒಕ್ಕಲ ಸಮ್ಮೇಳನವನ್ನು ಕರೆದು, ಅವರಿಗೆ ತಮ್ಮ ಪ್ರತಿನಿಧಿ ಸಮಿತಿಗಳನ್ನು ನಿಯಮಿಸಲು ಹೇಳುವುದು. ಅಂಥ ಪ್ರತಿನಿಧಿಗಳೊಡನೆ ಚರ್ಚಿಸಿ ಆಹಾರ ಪದಾರ್ಥಗಳ ಬೆಲೆಯನ್ನು ನಿರ್ಧರಿಸಬೇಕು. ಅದರಿಂದ ತನ್ನವರೇ ಧಾರಣೆ ಗೊತ್ತುಮಾಡಿದ್ದಾರೆಂದು ಒಕ್ಕಲಿಗೆನಿಸುತ್ತದೆ. ಇಷ್ಟಲ್ಲದೆ ನಿಯಂತ್ರಣದ ಆಡಳಿತೆಯಲ್ಲಿ ಒಕ್ಕಲಿಗಾಗುವ ನಿಜವಾದ ತೊಂದರೆಗಳನ್ನು ಅಧಿಕಾರಿಗಳಿಗೆ ತಿಳಿಯಲು ಸಾಧ್ಯವಾಗುತ್ತದೆ. ಹೀಗೆ ಅದರಿಂದ ಒಂದು ಹಿತಕರವಾದ ಜನಮತವನ್ನೂ ರೂಪಿಸಲು ಸಾಧ್ಯವಾಗುವುದು.

“ಸ್ವತಃ ನನ್ನನ್ನು ಕೇಳಿದರೆ ಒಮ್ಮೆ ಕಿತ್ತೊಗೆದ ನಿಯಂತ್ರಣಗಳತ್ತ ಪುನಃ ತಿರುಗುವುದು ಒಳ್ಳೆಯದಲ್ಲ. ನಾವು ವಿಶ್ವಪ್ರಯತ್ನದಿಂದ ಅದು ಬರದಂತೆ ನೋಡಿಕೊಳ್ಳಬೇಕು. ಬರದಂತೆ ನೋಡಿಕೊಳ್ಳುವದೆಂದರೆ ವಾಮಮಾರ್ಗಗಳಿಂದಲ್ಲ; ಬರದಂತೆ ಮಾಡಬೇಕೆಂದು ನಾವು ಮಂತ್ರಿಗಳ ಮನವೊಲಿಸಬೇಕು. ಕಡೆಗೂ ಅದು ಅನಿವಾರ್ಯವೆಂದೇ ಕಂಡುಬಂದರೆ ಅದನ್ನು ಲೋಕಾಭಿಪ್ರಾಯ ಬೆಂಬಲಿಸುವ ರೀತಿಯಲ್ಲಿ ಆಚರಣೆಗೆ ತರಬೇಕು. ಜನಮತದ ಬೆಂಬಲವೊಂದಿದ್ದರೆ ಹೇಗಾದರೂ ನಿಯಂತ್ರಣದ ಅಯೋಗ್ಯ ಪರಿಣಾಮಗಳನ್ನು ದೂರಗೊಳಿಸುವ ಆಶೆಯನ್ನು ನಾವು ಇಟ್ಟುಕೊಳ್ಳಬಹುದು.

“ಈ ವಿಷಯದಲ್ಲಿ ಅಭಿಪ್ರಾಯ ಕೊಡಬೇಕೆಂದು ನಾನು ನಿಮ್ಮನ್ನು ಕೇಳಿಕೊಳ್ಳುತ್ತೇನೆ.”

ನಿಯಂತ್ರಣದ ಬಗ್ಗೆ ಮೇಲೆ ಹೇಳಿದ ಅಭಿಮತ ನನಗೆ ಸಮ್ಮತವಿದೆ. ನನಗೆ ತಿಳಿದ ಮಟ್ಟಿಗೆ, ಗುಜರಾತಿನ ರಚನಾತ್ಮಕ ಕೆಲಸಗಾರರೆಲ್ಲ ಇದೇ ಅಭಿಪ್ರಾಯದವರಿದ್ದಾರೆ. ಅವರ ಅಭಿಪ್ರಾಯ ಅವರ ನಿಜವಾದ ಅನುಭವವನ್ನೇ ಆಧರಿಸಿ ನಿಂತದ್ದು.

ಹೆಚ್ಚಾಗಿ ನೀತಿಗೆಟ್ಟ ಜನತೆಗೆ ನಿಯಂತ್ರಣವಾಗಲಿ ವಿನಿಯಂತ್ರಣವಾಗಲಿ ಸುಖವನ್ನು ತರಲಾರದು.

ಶ್ರೀ ಸಂತಬಾಲರು ಎರಡು ವಿಕಲ್ಪಗಳನ್ನು ಸೂಚಿಸಿದ್ದಾರೆ. ಅವುಗಳಲ್ಲಿ ಮೊದಲನೆಯದೇ ಉತ್ತಮವೂ ಶ್ರೇಮಕರವೂ ಎನಿಸುತ್ತದೆ. ಆಯ್ದ ಪ್ರಾತಿನಿಧಿಕ ಸಮಿತಿಗಳ ವ್ಯಾಪ್ತಿಗೆ ಒಂದು ಗಡಿಯಿದೆ. ಜನರ ಸಾಮಾನ್ಯ ನೀತಿಯ ನೆಲೆ ಕೆಳಗಿಳಿದಿರುವಾಗ, ಸರಳವೂ ಪ್ರಾಮಾಣಿಕವೂ ಆದ ಆಡಳಿತೆ ಅವಶ್ಯವಿರುವ ಕಾರ್ಯಗಳಲ್ಲಿ ಆಯ್ಕೆಯ ಕ್ರಮಗಳನ್ನು ಬಳಸುವುದು ತಪ್ಪಾಗುತ್ತದೆ. ಜಲಧಾನಿಯೊಂದರಿಂದ ನೀವೆಂದೂ ಅದರಲ್ಲಿರುವುದಕ್ಕಿಂತ ಉತ್ತಮವಾದ ನೀರನ್ನಾಗಲಿ ಹೆಚ್ಚಿಗೆ ನೀರನ್ನಾಗಲಿ ತೆಗೆಯಲಾರಿರಿ.

ಇನ್ನೊಂದು ಒಳ್ಳೆಯ ವಿಕಲ್ಪವೆಂದರೆ, ಸಹಕಾರ ಸಂಘಗಳನ್ನು ಸಂಘಟಿಸುವುದು ಮತ್ತು ತನ್ಮೂಲಕ ಕೆಲಸ ಸಾಗಿಸುವುದು. ಸಹಕಾರ ಸಂಘವೊಂದು ಸಾರ್ಥಕವಾದ ಜನತೆಯ ಸಂಘವೆನಿಸಬಲ್ಲದು.

ಇದೂ ಸಾಧ್ಯವಿಲ್ಲದಲ್ಲಿ ಸರಕಾರ ತನ್ನ ಅಧಿಕಾರಿಗಳ ಮೂಲಕವೇ ನೇರವಾಗಿ ಕೆಲಸ ನಡೆಸುವುದು ಉತ್ತಮ. ಆಯ್ಕೆ ಮುಗಿದ ನಂತರ ಪ್ರತಿನಿಧಿಗಳ ಮೇಲೆ ಆಯ್ದವರಿಗೆ ಯಾವ ಅಧಿಕಾರವೂ ಉಳಿಯುವದಿಲ್ಲ. ಮತ್ತು ಕೆಲಸ ಸರಿಯಾಗಿ ಸಾಗದಿದ್ದರೆ, ಸರಕಾರಕ್ಕೆ ಪ್ರತಿನಿಧಿಗಳ ಕಡೆ ಬೊಟ್ಟುಮಾಡಿ ತೋರಿಸಿ ಅವ್ಯವಸ್ಥೆಗೆ ತಾನು ಹೊಣೆಯಲ್ಲವೆನ್ನಲು ಬರುತ್ತದೆ. ಇದು ಹೊಣೆಗೇಡಿತನ ಕ್ಕೊಯ್ಯುವುಟ್ಟಿಸುತ್ತದೆ. ಕೆಲಸ ತಮ್ಮದೇ ಎಂದು ತಿಳಿದುಕೊಂಡು ಮಾಡುವ ಜನರಿಗೆ ಅದನ್ನು ಒಪ್ಪಿಸುವುದೇ ಕೆಲಸ ಸರಿಯಾಗಿ ನಡೆಸುವಲ್ಲಿ ಅತಿ ಮುಖ್ಯವಾದ ಅಂಶ. ನಿಜವಾಗಿ ನೋಡಿದರೆ, ಬಂಡವಲಶಾಹಿ ತನಗೆ ಬದುಕುವ ಹಕ್ಕಿದೆಯೆಂದು ಸಾಧಿಸುವುದು ಇದರ ಮೇಲೆಯೇ.

ಮುಂಬಯಿ, — ಕಿ. ಘ. ಮಶ್ರುವಾಲಾ
೯-೧೦-೪೮

---

## ಹುತ್ತ ಬಡಿದು ಹಾವು ಕೊಲ್ಲಹೋದಂತೆ

ಚಲಾವಣೆ ಮತ್ತು ನಿಯಂತ್ರಣಗಳ ಮೇಲೆ ಪತ್ರಿಕೆಗೆ ಬರೆದುಕೊಟ್ಟ ಒಂದು ಪ್ರಬಂಧದಲ್ಲಿ ಶ್ರೀ ಜೆ. ಸಿ. ಕುಮಾರಪ್ಪನವರು ಹೇಳುತ್ತಾರೆ: —

“ನಮ್ಮ ಹಿಂದಿನ ಅನುಭವ ಕಲಿಸಿದ ಪಾಠಗಳನ್ನು ಸರಕಾರ ಲಕ್ಷ್ಯಕ್ಕೆ ತಂದುಕೊಂಡಿಲ್ಲವೆಂಬುದನ್ನು ಅದೀಗ ಪುನಃ ನಿಯಂತ್ರಣ ಹೇರಲು ಮಾಡಿದ ಕಾರ್ಯ ತೋರಿಸಿಕೊಡುತ್ತದೆ. ಕೊಡುವ ಕೊಳ್ಳುವವರಿಬ್ಬರಲ್ಲೂ ನೀತಿವಂತಿಕೆಯಿಲ್ಲದುದು ಸ್ಪಷ್ಟವಿರುವಾಗ ಪುನಃ ನಿಯಂತ್ರಣವನ್ನು ತರುವುದೆಂದರೆ ಹಳೆಯ ತಪ್ಪನ್ನು ಪುನಃ ಮಾಡಿದಂತಾಗುವುದು. ನಿಯಂತ್ರಣದಲ್ಲಿ ಮುಖ್ಯಾಂಗಗಳೆಂದರೆ, ಆಡಳಿತೆಯ ನೌಕರ ವರ್ಗಕ್ಕೆ ಮತ್ತು ವ್ಯಾಪಾರಿಗೆ ಇರಬೇಕಾದ ತನ್ನ ನಾಗರಿಕತ್ವದ ಜ್ಞಾನ. ಇವೆರಡೂ ಇಲ್ಲವಾದಾಗ— ಇಲ್ಲವೆಂದು ಬೇಕಾದಷ್ಟು ಸಲ ಸಿದ್ಧವಾಗಿ ಹೋಗಿದೆ— ನಿಯಂತ್ರಣವನ್ನು ತರುವುದು ಉಣ್ಣೆಯ ಹಾಸುಗಳೂ ಬಟ್ಟೆಯ ದಿಂಬುಗಳೂ ತುಂಬಿರುವ ಕೋಣೆಯೊಂದರಲ್ಲಿ ಆಡುತ್ತಿರುವ ಮಗುವಿಗೆ ಉರಿವ ಸೂಡಿಯನ್ನು ಕೊಟ್ಟ ಹಾಗಾಗುವದು. ಸೂಡಿಯನ್ನು ಉಪಯೋಗಿಸಲು ಕೆಲಮಟ್ಟಿನ ಯಮನಿಯಮಗಳು ಅವಶ್ಯಕ. ಮಗುವಿನಿಂದ ಅವನ್ನು ನಿರೀಕ್ಷಿಸಲಾಗದು. ಆದುದರಿಂದ ನಂಬಲು ಸಾಧ್ಯವಿಲ್ಲದವರ ಕೈಗೆ ಮಾರಣ ಸಾಧನಗಳನ್ನು ಕೊಡುವುದು ಅಪರಾಧವಾಗುವುದು.”

### ವಿಮರ್ಶೆ

ಈ ವಿಷಯದ ಮೇಲೆ ಹಿಂದೀ ಸರಕಾರ ಹೊರಡಿಸಿದ ಒಂದು ಸಂಕ್ಷಿಪ್ತ ವರದಿಯ ವಿಮರ್ಶೆ ಬಂದ ನಂತರ ಶ್ರೀ ಕುಮಾರಪ್ಪನವರು ಹೇಳುತ್ತಾರೆ:

“ಬೆಳೆಯ ಸಾಮಾನುಗಳ ಕೊರತೆಯಿಂದೆಯೆಂದು ಬಹಳ ಜನ ಹೇಳುತ್ತಾರೆ; ಆದರೆ ಇದು ಇಡಿ ಜಗತ್ತಿನ ರೋಗವೆಂಬುದನ್ನೂ ನಾವೇನೂ ಅದಕ್ಕೆ ಹೊರತಲ್ಲವೆಂಬುದನ್ನೂ ಅವರು ಮರೆಯುತ್ತಾರೆ. ಶೀಘ್ರ ಪರಿಣಾಮಿ ಕ್ರಮಗಳಿಂದ ಬೆಳೆಯ ಸಾಮಾನುಗಳನ್ನು ತಯಾರಿಸುವುದರಲ್ಲಿ ಪರಿಸ್ಥಿತಿಯನ್ನು ಸುಧಾರಿಸುವ ಬಗೆಯಿದೆ. ಈಗ ಮೂಲಭೂತ ಯಂತ್ರ ಸಾಮಗ್ರಿಗಳು ಸಿಗುವುದಿಲ್ಲ. ಆದುದರಿಂದ ಅವಸರದ ಕ್ರಮವೆಂದಾದರೂ ಮನೆ ಕೈಗಾರಿಕೆಗಳತ್ತ ನಾವು ತಿರುಗಬೇಕು. ದುರದೃಷ್ಟವಶದಿಂದ ಅಧಿಕಾರಸ್ಥರಲ್ಲಿ ಬಹಳ ಜನರಿಗೆ ಬೃಹದಾಕಾರದಲ್ಲಲ್ಲದೆ ಬೇರೆಯ ರೂಪದಲ್ಲಿ ಸಂಘಟನೆ ಮಾಡುವ ವಿಚಾರ ಹೊಳೆಯದು. ಅತಿ ಪ್ರಸರಣವನ್ನು ತಡೆಗಟ್ಟಲು ಇದೊಂದು ಕ್ರಮವೆಂದು ನಾಳೆ ಬರುವ ಅಧಿಕಾರಸ್ಥರಿಗೆ ವಿಚಾರ ಹೊಳೆದು ಹಳ್ಳಿಯ ಮತ್ತು ಮನೆ ಕೈಗಾರಿಕೆಗಳನ್ನು ಊರ್ಜಿತಾವಸ್ಥೆಗೆ ತಂದರೆ ನಮ್ಮ ದೇಶದ ಜನಸಾಮಾನ್ಯರಿಗೆ ಅದೊಂದು ವರವೇ ಆದೀತು.

“ಕೆಲ ಸಲಹೆಗಾರರು ಪಾನನಿರೋಧವನ್ನು ಬಿಟ್ಟುಬಿಡಬೇಕೆನ್ನುತ್ತಾರೆ. ಸಮಾಜ ರಚನೆಗೆ ಜನ ಯಾವ ಬೆಲೆ ಕೊಡುತ್ತದೆ ಎಂಬುದನ್ನು ಇದು ತೋರಿಸುತ್ತದೆ. ನಮ್ಮಿಂದ ಸಾಮಾಜಿಕ ಮೂಲ್ಯಗಳನ್ನು ಕಡೆಗಣಿಸುವದು ಸಾಧ್ಯವಿಲ್ಲ. ಗಂಡಾಂತರ ಸಮಯದಲ್ಲಿ ಅದರ ಅವಶ್ಯಕತೆ ಮತ್ತಷ್ಟುಹೆಚ್ಚು. ನಾವು ಎಷ್ಟೋ ವಸ್ತುಗಳಿಲ್ಲದಿದ್ದರೂ ಕೆಲಸಸಾಗಿಸಬಲ್ಲೆವು, ಆದರೆ ಹಣದ ಅವಶ್ಯಕತೆಯಿದೆಯೆಂಬ ವಾದದಿಂದ ನಾವು ನಮ್ಮ ಕೆಲ ಸಹಜೀವಿಗಳನ್ನುಗಟಾರಕ್ಕೆ ಕಳಿಸಿಕೊಡಲಾರೆವು. ಅರ್ಥಶಾಸ್ತ್ರದ ಉತ್ಸಾಹಿಗಳ ಕೈಯಿಂದ ರಾಷ್ಟ್ರ ನಿರ್ಮಾಪಕ ಚಟುವಟಿಕೆಗಳನ್ನು ಸುರಕ್ಷಿತವಾಗಿ ಇಟ್ಟರಬೇಕು.

“ಕೂಲಿಕಾರರ ಒಬ್ಬ ಪ್ರಮುಖ ಮುಖಂಡ ಕೂಡ—ಹಳ್ಳಿಗರಿಗೆ ಹೆಚ್ಚಿನ ಕ್ರಯಶಕ್ತಿಯನ್ನು ಕೊಟ್ಟಿರುವುದರಿಂದ ಹಳ್ಳಿಯ ಸಾಲಗಾರಿಕೆಯನ್ನು ಹೆಚ್ಚು ಕಡಿಮೆ ತೊಳೆದು ತೆಗೆಯಲಾಗಿದೆ” ಎಂದು ಅಪಲಾಪ ಮಾಡಿದ್ದನ್ನು ನೋಡಿ ನಮಗೆ ಆಶ್ಚರ್ಯವಾಗಿದೆ. ಹೆಚ್ಚಿದ ಕಾಳುಕಡಿಗಳ ಬೆಲೆ ಹೆಚ್ಚು ಬೆಳೆವ ಕೆಲವು ಜನರಿಗೆ ಎಷ್ಟೇ ತಾರಕವೆನಿಸಿದರೂ ಕೊರತೆಯಲ್ಲಿ ತೊಳಲುವ ಬಹುಸಂಖ್ಯ ಒಕ್ಕಲಿಗರಿಗೆ ಅದು ತಾರಕವೆನಿಸಲಿಲ್ಲ. ಕಾಳುಕಡಿಗಳ ಧಾರಣೆ ಏರಿದ್ದರೂ ಅದೇ ಪ್ರಕಾರ ಕಾರಖಾನೆಯ ಸಾಮಾನುಗಳ ಧಾರಣೆಯೂ ಹೆಚ್ಚಿರುವುದರಿಂದ ಈ ತೋರಿಕೆಯ ಪರಿಹಾರವೆಂಬುದು ನಷ್ಟಕ್ಕಿಂತ ಕನಿಷ್ಠವಾಗಿ ಬಿಟ್ಟಿದೆ.

“ಹಣಕಾಸಿನ ಸಲಹೆಗಾರರಾದ ಡಾ. ಪಿ. ಜೆ. ಥಾಮಸ್ಸರು ಸರಕಾರಿ ಅಧಿಕಾರಿಗಳ ಸಂಖ್ಯೆ ಕಡಿಮೆ ಮಾಡಬೇಕೆಂದು ಆಗ್ರಹಪೂರ್ವಕ ಸಾಧಿಸುತ್ತ ವಿಚಿತ್ರ ರೀತಿಯಿಂದ ಅಷ್ಟೇ ಆಗ್ರಹದಿಂದ ಸ್ವಂತ ಶಾಖೆಯ ವಿಸ್ತರಣವನ್ನು ಪುರಸ್ಕರಿಸುತ್ತಿದ್ದಾರೆ. ಬಹುಶಃ ಬಹುಸಂಖ್ಯ ಸಲಹೆಗಾರರು ಕೆಲಸಮಾಡುವ ಬಗೆಯೇ ಹೀಗೆಂದು ತೋರುತ್ತದೆ. ಈ ಸಂದರ್ಭವನ್ನು ತೆಗೆದುಕೊಂಡು ಉದ್ಯಮಿಗಳು ಸ್ವರಕ್ಷಣೆಗಾಗಿ ಕೂಲಿಕಾರರ ಕಾಯದೆ ಪಾಸಾಗಬೇಕೆಂದು ಕೇಳುತ್ತಿದ್ದಾರೆ. ಅವರೂ ಮೂರನೆಯ ಸರತಿ ಕೆಲಸಮಾಡಿಸುವುದನ್ನು ಪ್ರಾರಂಭಿಸಬೇಕೆನ್ನುತ್ತಾರೆ; ಅದಕ್ಕಾಗಿ ಕಲ್ಲಿದ್ದಲು ಮತ್ತು ಅಸಿದ್ಧ ಪದಾರ್ಥಗಳನ್ನು ಒದಗಿಸಿರೆನ್ನುತ್ತಾರೆ. ಅವರು ತಮಗೆ ವಿಶೇಷವಾದ ಸವಕಳಿಯ ಭತ್ತೆಯನ್ನು, ಆದಾಯಕರದಲ್ಲಿ ರಿಯಾಯಿತಿಯನ್ನು ಕೊಡಬೇಕೆನ್ನುತ್ತಾರೆ! ಉದ್ಯಮಿಗಳ ನಂಬಿಗೆಯನ್ನು ಹಾರಿಸುವಂಥ ಯಾವ ಹೇಳಿಕೆಯನ್ನೂ ಸರಕಾರ ಕೊಡಬಾರದೆಂದೂ ಅದು ಹೊಸದಾಗಿ ತನ್ನ ಉದ್ಯಮ ಧೋರಣವನ್ನು ಸಾರಬೇಕೆಂದೂ ಅವರು ಬಯಸುತ್ತಾರೆ! ಹೀಗೆ ಎಲ್ಲ ಸಲಹೆಗಾರರೂ ತಂತಮ್ಮ ಪ್ರಕರಣವನ್ನು ಸಮರ್ಥಿಸಿ ವಾದಿಸಲು ಸರಕಾರದೆಡೆಗೆ ಸಾಗಿದ್ದಾರೆ. ಸರಕಾರಕ್ಕಾದರೋ ಶ್ರೀ ಜಯಪ್ರಕಾಶ ನಾರಾಯಣರು ಹೇಳುವಂತೆ, ಮಾಡಿದರೆ ಸರ್ವ ಅಧಿಕಾರಗಳೂ ತನ್ನಲ್ಲೇ ಉಳಿವ ಮಹಾ ಯೋಜನೆಯನ್ನೇ ಮಾಡಬೇಕು, ಇಲ್ಲದಿದ್ದರೆ ಸುಮ್ಮನೆ ಕುಳಿತುಕೊಳ್ಳಬೇಕು ಎಂಬ ವಿಚಾರ ಬೆನ್ನು ಹತ್ತಿದ ಬೇತಾಳವಾಗಿದೆ ಎಂದು ತೋರುತ್ತದೆ. ಆದರಿಂದಲೇ ಅದು ತನ್ನ ಅಧಿಕಾರ ಮುಷ್ಟಿಯನ್ನು ತೆರೆಯಲು ಇಷ್ಟಪಡುತ್ತಿಲ್ಲ; ಅದಕ್ಕೇ ಅದು ಬೆಲೆಯಷ್ಟಾಗುತ್ತದೆಂಬುದನ್ನು ನೋಡದೆಯೇ ತನ್ನ ಶಾಖೆಗಳನ್ನು ವಿಸ್ತರಿಸುವ ಲೋಭದಿಂದ ಖರ್ಚು ಗಗನಕ್ಕೆ ಮುಟ್ಟಿಸುತ್ತಿದೆ.

### ಸೂಚನೆಗಳು

“ನಾವು ಈ ಮೊದಲೆ ಸೂಚಿಸಿದಂತೆ ಶೀಲ ಮತ್ತು ಸಂಯಮದ ಅಭಿವೃದ್ಧಿಯೇ ಪ್ರಥಮ ಅವಶ್ಯಕತೆಯಾಗಿದೆ. ಇದರಲ್ಲಿ ಸರಕಾರದವರೇ ಮಾರ್ಗದರ್ಶನ ಮಾಡತಕ್ಕದ್ದು. ಅಕ್ಷಮಣೀಕ್ಷೇಪವಾಗಿ ಅವರು ಸ್ವಂತದುಂದುಗಳನ್ನು ಮುಕ್ತಾಯಗೊಳಿಸಬೇಕು. ಪ್ರಾಂತೀಯ ಮಂತ್ರಿಗಳಿಗೆ, ಸರಕಾರಿ ಅಧಿಕಾರಿಗಳಿಗೆ ಮತ್ತು ಇತರ ಉಚ್ಚಾಧಿಕಾರಿಗಳಿಗೆ ಒಮ್ಮೆ ತಿದ್ದ ರಾಜಕೀಯ ಸಂಬಳವನ್ನು, ಅರಿತೊಟ್ಟ ತಿಂದು ಜೀವಿಸುತ್ತಿರುವ ಸಾಮಾನ್ಯ ನಾಗರಿಕನ ಆರ್ಥಿಕ ಪರಿಸ್ಥಿತಿಗನುಗುಣವಾಗಿ ಬಹಳ ಮಟ್ಟಿಗೆ ಕೆಳಗಿಳಿಸತಕ್ಕದ್ದು. ಸರಕಾರವು ಹೀಗೆ ಮಾಡುವ ಪರಿಗೆ ದೇಶದ ಆರ್ಥಿಕ ಪರಿಸ್ಥಿತಿಯನ್ನು ಸುಧಾರ್ರ ಮಾಡುವಲ್ಲಿ ಎರಡನೆಯವರು ಸಹಾಯ ಮಾಡಬೇಕೆಂದು ಕೇಳಿಕೊಳ್ಳಲು ಅದಕ್ಕೆ ಬರಲಾರದು. ಘಂಟಾಘೋಷವಾಗಿ ಉಪದೇಶಿಸುತ್ತ ನಡೆಯುವದಕ್ಕಿಂತ ಪ್ರತ್ಯಕ್ಷ ಆಚರಣೆಯಿಂದ ನೀತಿಯನ್ನು ಬೋಧಿಸುವದು ಯಾವಾಗಲೂ ಹೆಚ್ಚು ಶ್ರೇಯಸ್ಕರವಾದುದು. ಸರಕಾರಿ ಸಾಲ ಪತ್ರಗಳನ್ನು ಹೊರಡಿಸಿ ಚಲಾವಣೆಯಲ್ಲಿದ್ದ ಹಣವನ್ನು ಹಿಂತೆಗೆದುಕೊಳ್ಳಬೇಕೆಂದು ಚಲಾವಣೆಯ ಸಂಬಂಧದಲ್ಲಿ ಕೊಡಲ್ಪಟ್ಟ ಸೂಚನೆಯ ಬಗ್ಗೆ ಹೀಗೆ ಹೇಳಬಹುದು. ಒಕ್ಕಲುತನದ ಅಭಿವೃದ್ಧಿಯಂಥ ವಿಶಿಷ್ಟ ಉದ್ದೇಶಗಳಿಗಾಗಿಯೇ ಈ ಹಣದ ವಿನಿಯೋಗ ಮಾಡಬೇಕೆಂದು ವಿಧಿಸದೆ ಮುಂದುಗಾಣೆ ಸರಕಾರದ ಕೈಯಲ್ಲಿ ಆ ಹಣವೆಲ್ಲ ಕೊಡುವದು ಗಂಡಾಂತರದ್ದಾಗುವದು. ಚಲಾವಣೆಯಲ್ಲಿದ್ದ ನೋಟುಗಳ ಸಂಖ್ಯೆಯು ಕಳೆದ ಹಲವು ತಿಂಗಳುಗಳಿಂದ ಕೋಟಿಗಟ್ಟಲೆ ಹೆಚ್ಚಿದೆ. ಮುದ್ರಣಾಲಯದಿಂದಲೆ ನಮ್ಮ ವೆಚ್ಚಗಳನ್ನೆಲ್ಲ ನಡೆಸುವದಾದರೆ ಅತಿಪ್ರಸರಣವನ್ನು ತಡೆಯಲು ಮಾಡುವ ಪ್ರಯತ್ನಗಳೆಲ್ಲ ನಿಷ್ಪ್ರಯೋಜಕವಾದಾವು.

ಬಂಗಾರ ಮತ್ತು ಬೆಳ್ಳಿಯಂಥ ಅಮೂಲ್ಯ ಸೊತ್ತುಗಳ ಆಧಾರದ ಮೇಲೆ ಚಲಾವಣೆಯನ್ನು ನಿಲ್ಲಿಸುವಂತೆ ಅದೂರದರ್ಶಿಯಾದ ನಮ್ಮ ಸರಕಾರದ ಮನಸ್ಸನ್ನು ಬೇಗ ಒಲಿಸಿದಷ್ಟು ದೇಶಕ್ಕೆ ಹಿತಕರ. ಸರಕಾರದ ಪತ್ತು ಅದರಿಂದ ಹೆಚ್ಚುವದು.

“ಉತ್ಪಾದನೆಯ ಸಂಬಂಧದಲ್ಲಿಯೂ ನಾವು ಮೇಲಿಂದ ಮೇಲೆ ಹೇಳಿದ್ದೇವೆ ಗ್ರಾಮ ಮತ್ತು ಕೈಗಾರಿಕೆಯ ಉದ್ಯೋಗಗಳನ್ನು ಹೆಚ್ಚಿಸಬೇಕು ಮತ್ತು ನಮಗೆ ಬೇಕಾದ ಮೂಲ ಅವಶ್ಯಕತೆಗಳನ್ನೆಲ್ಲ ಒಕ್ಕಲಿಗನವು ಉತ್ಪಾದಿಸುವಂತೆ ನೋಡಿಕೊಳ್ಳಬೇಕು ಎಂಬುದನ್ನು ನಾವು ಒಪ್ಪುತ್ತೇವೆ. ಪರದೇಶ ವ್ಯಾಪಾರವನ್ನು ಉಳಿಕೆಯ ಪದಾರ್ಥಗಳ ಮಟ್ಟಿಗೆ ಮಾತ್ರ ಮಿತಗೊಳಿಸಬೇಕು. ದೂರ ಸ್ಥಳಗಳಿಗೆ ಸಾಮಾನುಗಳನ್ನು ಕಳಿಸುವಾಗ ಮಾತ್ರ ಹಣದ ವಿನಿಮಯವನ್ನು ಉಪಯೋಗಿಸಬೇಕು; ಸ್ಥಳೀಯ ವಿನಿಮಯ ವ್ಯವಹಾರವೆಲ್ಲ ಶಕ್ಯವಿದ್ದಮಟ್ಟಿಗೆ ವಿವಿಧೋದ್ದೇಶ ಸಂಘಗಳ ಮೂಲಕ ವಸ್ತುಗಳ ವಿನಿಮಯ ರೂಪವಾಗಿ ನಡೆಯತಕ್ಕದ್ದು. ಕಾರಖಾನೆಗಳಲ್ಲಿ ಉತ್ಪನ್ನವಾದ ವಸ್ತುಗಳ ಧಾರಣೆಯನ್ನವಲಂಬಿಸಿ ಒಕ್ಕಲತನ ಉತ್ಪಾದನೆಯ ಧಾರಣೆಯನ್ನು ಗೊತ್ತುಪಡಿಸಬಾರದು; ಅದರ ಬದಲು ಇಂಥ ಪದಾರ್ಥಗಳ ಉತ್ಪಾದನೆಗೆ ಹತ್ತುವ ಪರಿಶ್ರಮ ಪ್ರಯತ್ನಗಳನ್ನು ಆಧರಿಸಿ ಸ್ವತಂತ್ರ ರೀತಿಯಿಂದ ಗೊತ್ತುಪಡಿಸತಕ್ಕದ್ದು. ಹೀಗೆ ಮಾಡದಿದ್ದರೆ, ಒಕ್ಕಲತನವು ಲಾಭದಾಯಕ ಹೋರೆಯಲ್ಲ ಎಂಬ ಹಳೆಯ ಕೂಗು ತನ್ನ ಪ್ರಭಾವವನ್ನು ಬೀರದೆ ಇರದು.

“ಸಾರ್ವಜನಿಕರ ಮೂಲಭೂತ ಅವಶ್ಯಕತೆಗಳನ್ನು ಪೂರೈಸುವಲ್ಲಿ ಜನಸಾಮಾನ್ಯನು ಪಡುವ ಪರಿಶ್ರಮ” ಮಾಡುವ ಚಟುವಟಿಕೆಗಳನ್ನು ಆಧರಿಸಿ ನಮ್ಮ ಆರ್ಥಿಕ ರಚನೆಯು ಸ್ಥಿರವಾಗಿ ಸಂಸ್ಥಾಪಿತವಾಗುವ ಪರಿಗೆ ಗುಡಿಯ ಕಳಸವನ್ನು ಬುಡಮೇಲು ಮಾಡಿ ನಿಲ್ಲಿಸಿದಂತೆ ಯಾವಾಗಲೂ ಅಸ್ಥಿರವಾದ ಸಮತೂಕದಲ್ಲಿಯೇ ನಾವಿರಬೇಕಾಗುವದು. ಸರಕಾರವು ತನ್ನಆರ್ಥಿಕ ದುಃಸ್ಥಿತಿಯ ವಿಮರ್ಶೆ ಮಾಡುವ ಸಮಯ ಬಂದಿದೆ. ಇಷ್ಟೇ ಅಲ್ಲ ನಿರ್ದಿಷ್ಟ ಮತ್ತು ವಿಚಾರಪೂರ್ಣ ಆರ್ಥಿಕ ಧೋರಣದ ಅಭಾವದ ಮೂಲಕ ಉಂಟಾದ ಈಗಿನ ರಾಷ್ಟ್ರದ ಆರ್ಥಿಕ ಗೊಂದಲವನ್ನು ವಿಮರ್ಶಿಸುವ ಕಾಲವೂ ಬಂದಿದೆ.

# ಸರ್ವೋದಯ ಮತ್ತು ಇತರ ತತ್ತ್ವಗಳು

## ( ಗಾಂಧೀಜಿಯವರೊಡನಾದ ಮಾತಿನ ಟಿಪ್ಪಣಿ )

ವರ್ಧಾ, ೨೩-೮-೪೪

ಇಂದು ಬೆಳಗು ೬ಕ್ಕೆ ಗಾಂಧೀಜಿಯವರನ್ನು ಸಂಧಿಸಿದೆ. ಅವರು ಹರಿಜನ ಅತ್ಯಮೂಲ್ಯ ವಿಶ್ವಸ್ತ ಮಂಡಳಿಯ ಬಗೆ ಸಲಹೆ ಸೂಚನೆಗಳನ್ನು ಕೊಟ್ಟರು. ಆ ಮೇಲೆ ಮಾತು ಗ್ರಾಮಸೇವೆಯತ್ತ ಹೊರಳಿತು. ಈ ಬಗೆಯ ಕಾರ್ಯವು ಯಾವದೇ ಬಗೆಯ ಸಂಸ್ಥೆಯ ಛತ್ರಾಛತ್ರದಲ್ಲಿ ಆಗುವಂತಾಗಬಾರದೆಂದು ಇತ್ತೀಚೆ ಅವರು ಅಭಿಪ್ರಾಯ ವ್ಯಕ್ತಪಡಿಸಿದರು. ಅದೇ ಮಾತನ್ನೆತ್ತಿ ಬಾಪು ಹೀಗೆ ನುಡಿದರು.

"ಯಾವದೇ ಸಂಸ್ಥೆಯ ಛತ್ರಾಛತ್ರದಲ್ಲಿ ಈ ಬಗೆಯ ಕಾರ್ಯವಾಗುವಂತಾಗಬಾರದು ಎಂಬ ಮಾತಿನ ಅರ್ಥವನ್ನು ಸರಿಯಾಗಿ ಮಾಡಿಕೊಂಡಿದ್ದರೆ ಈ ಬಗ್ಗೆ ಕಿಶೋರಲಾಲರ ಸುದೀರ್ಘ ಭಾಷ್ಯದ ಅಗತ್ಯವೇ ಇರುತ್ತಿದ್ದಿಲ್ಲ. ಹಾಗೆ ಹೇಳಿದನೆಂದು ಕೆಲಸಗಾರರಲ್ಲಿ ಪರಸ್ಪರ ಸಹಕಾರವಾಗಲೀ ಸಂಬಂಧವಾಗಲೀ ಇರಬಾರದೆಂದು ಅರ್ಥವಲ್ಲ. ಇಷ್ಟೇ ಅಲ್ಲ, ನಾವು ಕೆಲಸಗಾರರಿಗೆ ಒಂದು ಸಾರ್ವಜನಿಕ ನಿಧಿಯಿಂದ ಕೆಲಕಾಲ ಪ್ರತಿಫಲವನ್ನೂ ಕೊಡಬೇಕೆಂದು ಗೊತ್ತು ಮಾಡಿದ್ದೇವೆ. ಅದರಿಂದ ಅಸಂಘಟಿತ ಕಾರ್ಯವೇ ಬೇಕೆಂದು ನಾನು ಹೇಳುವದರ ಅರ್ಥವೆಂದರೆ ಗ್ರಾಮಸೇವಕರು ತಮ್ಮ ಕಾರ್ಯಕ್ರಮಕ್ಕೂ ಕಾರ್ಯಪದ್ಧತಿಗೂ ಯಾವದೋ ಒಂದು ವರಿಷ್ಠ ಸಂಸ್ಥೆಯ ಸಲಹೆ ಸೂಚನೆಗಳಿಗಾಗಿ ಕಾಯ್ದಿರಬೇಕಾಗಿಲ್ಲ. ಅವರು ತಾವೇ ತಮ್ಮ ಕಾರ್ಯದ ರೂಪರೇಷೆಯನ್ನು ನಿರ್ಧರಿಸಿಕೊಂಡು ಕೈಕೊಂಡ ಕೆಲಸವನ್ನು ಸಮರ್ಪಕವಾಗಿ ಮಾಡಿ ಪೂರೈಸಲು ಸ್ವತಂತ್ರರಿರಬೇಕು. ಇಂತಹ ಕೆಲಸಗಾರನು ತನ್ನ ಉಪಯುಕ್ತತೆಯ ಬಗ್ಗೆ ಹಳ್ಳಿಗರಲ್ಲಿ ನಂಬಿಗೆಯನ್ನು ಹುಟ್ಟಿಸಬೇಕು. ಅಂದರೆ ಇಂತಹ ಗ್ರಾಮಸೇವಕರ ಉಪಜೀವನದ ಭಾರವನ್ನು ಹೊರಲು ಹಳ್ಳಿಗರು ತಾವಾಗಿ ಮುಂದೆ ಬರುವರು. ಒಂದು ವೇಳೆ ಹಳ್ಳಿಯವರು ಹೀಗೆ ಮುಂದೆ ಬರದಿದ್ದರೆ ಗ್ರಾಮಸೇವಕನು ಯಾವುದಾದರೊಂದು ದುಡಿಮೆಯನ್ನೊ ಕೈಗಾರಿಕೆಯನ್ನೊ ಅವಲಂಬಿಸಿ ದಿನಕ್ಕೊಂದು ತಾಸು ಕೆಲಸಮಾಡಿ ತನ್ನ ಉದರನಿರ್ವಾಹವನ್ನು ಮಾಡಿಕೊಳ್ಳಬೇಕು. ಅವನಿಗೆ ಇನ್ನಾವುದೂ ಕೈಗಾರಿಕೆ ಗೊತ್ತಿರದಿದ್ದರೆ ಹಿಂಜುವದನ್ನೊ ನೂಲುವದನ್ನೊ ಕೈಕೊಂಡು ದಿನಕ್ಕೆ ೮ ತಾಸು ಆ ಕೆಲಸದಲ್ಲಿ ತೊಡಗಬೇಕು. ಸಾಮಾಜಿಕ ಉಪಯುಕ್ತತೆಯುಳ್ಳ ಹಾಗೂ ಉತ್ಪಾದಕವಾದ ಯಾವ ಕೆಲಸದಲ್ಲಿಯೂ ದಿನಕ್ಕೆ ೮ ತಾಸು ದುಡಿದವನಿಗೆ ಉದರನಿರ್ವಾಹ ಖಂಡಿತ ಸಿಕ್ಕುವದೆಂದು ನನ್ನ ದೃಢ ವಿಶ್ವಾಸವಿದೆ. ಸಾಮ್ಯವಾದದ ನನ್ನ ಆದರ್ಶವೆಂದರೆ ಎಲ್ಲರಿಗೂ ಸರಿಸಮಾನ ಕೂಲಿ ಅಷ್ಟೇ ಪ್ರತಿಫಲ ಸಿಕ್ಕತಕ್ಕದ್ದು ಎಂಬುದೇ ಆಗಿದೆ. ವಕೀಲ, ವೈದ್ಯ, ಶಿಕ್ಷಕ, ಕೂಲಿಕಾರ, ಕಸಗುಡಿಸುವವ ಎಲ್ಲರಿಗೂ ಅಷ್ಟೇ ಪ್ರತಿಫಲ ದೊರಕಬೇಕು. ಇಂದಿನ ಕಾಲದಲ್ಲಿ ಕೂಲಿಯಲ್ಲಿಯೂ ಪ್ರತಿಫಲದಲ್ಲಿಯೂ ಭೂಮ್ಯಾಕಾಶದಷ್ಟು ಅಂತರವಿದೆ. ಇಂದಿನ ಪರಿಸ್ಥಿತಿಯಲ್ಲಿ ಒಬ್ಬ ವಕೀಲನಿಗೆ ದಿನ ಒಂದಕ್ಕೆ ೧ ಸಾವಿರ ರೂಪಾಯಿ ಪ್ರತಿಫಲ ದೊರಕುತ್ತಿದ್ದರೆ ಒಬ್ಬ ಕಸಗುಡಿಸುವವನಿಗೆ ದಿನಕ್ಕೆ ೮ ಆಣೆ ಸಿಕ್ಕುವದು ದುಸ್ತರ."

ಹೀಗೆ ಬಾಪು ಗ್ರಾಮಸೇವೆಯಿಂದ ಸಾಮ್ಯವಾದದತ್ತ ಹೊರಳಿದರು. ನಾನೆಂದೆ:— ರಶಿಯಾದಲ್ಲಿ ಕಮ್ಯುನಿಸ್ಟ ಪಕ್ಷದವರು ಇದೇ ತತ್ತ್ವವನ್ನು ಅನುಸರಿಸುತ್ತಿದ್ದಾರೆಂದು ಕೇಳಿದ್ದೇನೆ. ತಮ್ಮ ಕೆಲಸವು ಯಾವ ಬಗೆಯದಾಗಿದ್ದರೂ ಆ ಪಕ್ಷದ ಜನರು ಸಮಾನ ಪ್ರತಿಫಲ ತೆಗೆದುಕೊಳ್ಳುತ್ತಾರೆ. ಅದಕ್ಕೆ ಬಾಪು ಅಂದರು, ರಾಮ ರಾವಣರಿಬ್ಬರೂ ಒಂದೇ ಬಗೆಯ ತಪಸ್ಸನ್ನು ಮಾಡಬೇಕಾಯ್ತು. ಅಷ್ಟೇ ಕಷ್ಟ ನಿಷ್ಠುರ ಸಹಿಸಬೇಕಾಯ್ತು. ಆಗ ನಾನು ಗಾಂಧೀಜಿಗೆ ಕರ್ತವ್ಯಚ್ಯುತನಾದ ತಮ್ಮ ಪಕ್ಷದ ಸದಸ್ಯನಿಗೆ ಕಮ್ಯುನಿಸ್ಟರು ಎಷ್ಟು ಉಗ್ರ ಶಾಸನ ಮಾಡುತ್ತಾರೆಂಬುದನ್ನು ವಿವರಿಸಿದೆ. ಒಂದು ಸಣ್ಣ ತಪ್ಪಿಗೂ ಎಂತಹ ಶಿಕ್ಷೆ! ದೊಡ್ಡ ಅಪರಾಧಕ್ಕಂತೂ ಪಕ್ಷದಿಂದ ಹದಚ್ಯುತಗೊಳಿಸುವ ಸಂಗತಿ. ಪಕ್ಷದ ಪ್ರತಿ ಸದಸ್ಯನೂ ಸ್ವಯಂ ದೋಷನಿಮರ್ಶೆ ಮಾಡಿಕೊಳ್ಳುವ ವಿಧಾನ ಒಂದೊಂದಾಗಿ ಅರುಹಿದೆ. ಈ ಬಗ್ಗೆ ಇನ್ನೂ ಹೆಚ್ಚು ಅರಿಯಲು ಗಾಂಧೀಜಿ ಉತ್ಸುಕತೆ ತೋರಿದರು. ಆದರೆ ಇವನ್ನೆಲ್ಲ ಓದಿ ತಿಳಿಯಲು ಸಮಯವಿಲ್ಲವೆಂದು ನುಡಿದರು. ಹಾಗೆಂದು ಓದುವದರಲ್ಲಿ ಅವರಿಗೆ ಉತ್ಸುಕತೆ ಇಲ್ಲದೆಯೆಂದಲ್ಲ. ಅವರು ಹೊಸ ಪುಸ್ತಕಗಳನ್ನು ಕಾಣುತ್ತಲೇ ಯಾವುದನ್ನು ಓದಲು ಎತ್ತಬೇಕು ಎಂಬುದೇ ಅವರಿಗೆ ತಿಳಿಯದಾಗುವದು. ಯಾಕೆಂದರೆ ಎಲ್ಲವನ್ನೂ ಅವರು ಓದ ಬಯಸುತ್ತಾರೆ. ಆದರೆ ಕರ್ತವ್ಯದ ಕರೆಯಲ್ಲಿ ಓದುವ ಉತ್ಸುಕತೆಯನ್ನು ತಗ್ಗಿಸಿಕೊಳ್ಳಬೇಕಾಗುತ್ತದೆ. ಅವರೆಂದರು, "ಈ ಪುಸ್ತಕಗಳನ್ನೆಲ್ಲ ಓದುವದೋ ಇಲ್ಲವೇ ಗೀತೆಯ ಬಗ್ಗೆ ಮಹಾದೇವ ಅವರು ಇದೇ ಬರೆದ ಪುಸ್ತಕವನ್ನು ಓದುವದೋ ಎಂದು ನನ್ನನ್ನೇ ನಾನು ಕೇಳಿಕೊಂಡೆ. ಮಹಾದೇವ ಅವರ ಕೈಬರೆಹದ ಪುಸ್ತಕವನ್ನೇ ಓದುವದು ಕರ್ತವ್ಯದ ಒಂದು ಭಾಗವೆಂದೇ ನಿರ್ಧರಿಸಿದೆ. ಯಾಕೆಂದರೆ ಅವರು ಆ ಪುಸ್ತಕವನ್ನು ನನ್ನ ಸೂಚನೆಯಂತೆ ಬರೆದಿದ್ದರು. ಎಂದೇ ನಿನ್ನೆಯಿಂದ ಅವನ್ನೇ ಓದುತ್ತಿರುವೆ"

ಹೀಗೇ ನಮ್ಮ ಮಾತು ಮುಂಬರಿಯಿತು. ಹಳ್ಳಿಗರ ಸಾಲ ಮತ್ತು ಅದರ ಪರಿಹಾರೋಪಾಯದ ಬಗ್ಗೆಯೂ ಶ್ರೀಮಂತರು ತಮ್ಮ ಧನದ ಧರ್ಮದರ್ಶಿಗಳಾಗಿದ್ದರೆ ಅವರ ಹೊಣೆಯೇನು ಕರ್ತವ್ಯವೇನು ಎಂಬ ಬಗ್ಗೆಯೂ ನಿಮ್ಮ ಅಭಿಪ್ರಾಯವೇನೆಂದು ಕೇಳಿದೆ. ಅದಕ್ಕೆ ಬಾಪು ಹೇಳಿದರು, "ಸಾಮಾನ್ಯ ಜನರ ಕೈಯಲ್ಲಿ ರಾಜ್ಯಭಾರದ ಸೂತ್ರ ಬಂದಂದು ಈ ಸಮಸ್ಯೆಗಳೆಲ್ಲ ಸುಲಭವಾಗಿ ಬಿಡುವವು. ಇಂದೋ ನಾಳೆಯೋ ಈ ರಾಜ್ಯಸೂತ್ರ ಅವರ ಕೈಗೆ ಬಂದೇ ಬರುವದು. ಈಗ ಈ ವಾತಾವರಣವೇ ಉಂಟಾಗಿದೆ, ಈ ಅಧಿಕಾರಕ್ಕೆ ಜನಸಾಮಾನ್ಯರು ಬಾಧ್ಯರೂ ಆಗಿದ್ದಾರೆ. ಅದ್ದರಿಂದ ರಾಜ್ಯಸೂತ್ರ ಅವರ ಕೈಗೆ ಬಂದೇ ತೀರಬೇಕು. ಇನ್ನು ಜನಸಾಮಾನ್ಯರ ಕೈಗೆ ಅಧಿಕಾರ ಬಂದಾಗ ಅವರಿಗೆ ರಾಜಕಾರಣದ ರಹಸ್ಯ ತಿಳಿಯದೆ ಹೋಗುವ ಸಂಭವವೂ ಇದೆ. ಆದರೂ ಅವರೇ ತಮ್ಮ ಮುಖಂಡರನ್ನು ಆಯ್ದುಕೊಳ್ಳಕಕ್ಕವರೆಂಬಲ್ಲಿ ಸಂದೇಹವಿಲ್ಲ.

"ಆ ಕಾಲಕ್ಕೆ ಮುಖಂಡತ್ವವು ನಮಗಾದರೂ ಬರಬಹುದು ಇಲ್ಲವೆ ಸಮಾಜವಾದಿಗಳಿಗಾದರೂ ಹೋಗಬಹುದು. ಜನತೆಯನ್ನು ನಿಷ್ಠೆಯಿಂದ ಸೇವಿಸಿದವರೇ ಅವರ ನೇತಾರರಾಗುವರು. ಅಂತಿಮ ಫಲವು ನಮ್ಮ ಸ್ವಾಧೀನದಲ್ಲಿಲ್ಲವೆಂದೂ ಸಾಧನಗಳನ್ನು ಮಾತ್ರ ನಾವು ನಿಯಂತ್ರಿಸಬಹುದೆಂದೂ ನಾವು ನಂಬುತ್ತೇವೆ. ಆದರೆ ಸಾಮ್ಯವಾದಿಗಳು ಫಲದತ್ತ ಮಾತ್ರ ಲಕ್ಷವಿಟ್ಟು ಅದನ್ನು ಪಡೆಯಲು ಬೇಕಾದ ಉಪಾಯವನ್ನೂ ಕೈಕೊಳ್ಳಲು ಹಿಂದೆಗೆಯರು. ಆದರೆ ನಾವು ಸಾಧನ ಶುದ್ಧಿಯನ್ನು ಕಾಯ್ದುಕೊಂಡು ಬಂದರೆ ಜನಸಾಮಾನ್ಯರ ಮುಖಂಡತ್ವವು ನಮ್ಮ ಕಡೆಗೇ ಉಳಿಯುವದು. ಹೀಗಾದಲ್ಲಿ ಸಾಮ್ಯವಾದಿಗಳಿಗೆ ಜಯ ಸಿಕ್ಕದು. ಸಾಮ್ಯವಾದಿಗಳ ಕೈಗೆ ಅಧಿಕಾರ ಸೂತ್ರ ಸಿಕ್ಕರೆ ಅವರು ಎಲ್ಲರ ಆಸ್ತಿಯನ್ನೂ ವಶಪಡಿಸಿಕೊಂಡು ಬಿಡುವ, ಸಾಲಗಳನ್ನೆಲ್ಲ ರದ್ದುಪಡಿಸುವ ಇವೇ ಮೊದಲಾದ ಉಗ್ರ ಉಪಾಯಗಳನ್ನೇ ಕೈಕೊಳ್ಳುವರು. ಆದರೆ ನಾವು ನಮ್ಮ ಸಾಧನಗಳನ್ನು ಸರಿಯಾಗಿ ನಿಯಂತ್ರಿಸಿಕೊಂಡರೆ ಅಧಿಕಾರವೆಂದಿಗೂ ಸಾಮ್ಯವಾದಿಗಳ ಕೈಸೇರದು. ಈಗಿನ ಮಟ್ಟಿಗೆ ಅವರು ತಮ್ಮ ಅನಿಯಂತ್ರಿತ ಭಾಷೆಯಿಂದ ಆಸ್ತಿಯುಳ್ಳವರನ್ನು ಬೆರಗುಗೊಳಿಸುವದಕ್ಕಿಂತ ಹೆಚ್ಚಿಗೇನನ್ನೂ ಸಾಧಿಸಲಾರರು. ನಾನು ಅಂತಹರನ್ನು ದಿಗ್ಭ್ರಮೆಗೊಳಿಸ ಬಯಸುವದಿಲ್ಲ. ಆದರೆ ಅವರಲ್ಲಿ ಆಮೂಲಾಗ್ರ ಪರಿವರ್ತನೆ ಉಂಟಾಗುವಂತೆ ಪ್ರಯತ್ನಿಸುವೆ. ಹೀಗೆಂದೇ ಕಳೆದ ಅಧಿವೇಶನದಲ್ಲಿ ಕಾರ್ಯವಾಹಕ ಸಮಿತಿಯು ಈ ಬಗ್ಗೆ ತನ್ನ ನಿಶ್ಚಿತ ಧೋರಣವನ್ನು ಸ್ಪಷ್ಟಪಡಿಸುವಂತೆ ಆಗ್ರಹ ಹಿಡಿದೆ. ಸಾಮ್ಯವಾದಿಗಳಾಡುವ ಮಾತು ಕೇಳಿ ನನಗೆ ನಗೆ ಬರುತ್ತದೆ. ನಾವು ಪ್ರಾಮಾಣಿಕರಾಗಿ ತುಂಬ ಎಚ್ಚರಿಕೆಯಿಂದಿದ್ದರೆ ಅವರು ನಮ್ಮ ದೇಶದಲ್ಲಿ ಗೆಲುವುಗಳಿಸಲಾರರು.

"ಈ ವರೆಗೆ ಈ ದಿಶೆಯಲ್ಲಿ ನಾವು ಸಾಧಿಸಿದ್ದು ಅತ್ಯಲ್ಪವೇ. ಆದರೂ" — " ರಂಥ ಜನರಲ್ಲಿ ಸಾಕಷ್ಟು ಪರಿವರ್ತನೆ ಘಟಿಸಿದ್ದೇವೆ ಅವರು ತಮ್ಮ ಬಳಿಗಿದ್ದ ಧನದ ಧರ್ಮದರ್ಶಿಗಳೆಂದು ಸ್ವಲ್ಪ ಮಟ್ಟಿಗಾದರೂ ತಿಳಿಯಲು ಪ್ರಾರಂಭಿಸಿದ್ದಾರೆ. ಈ ಕಾರ್ಯಕ್ಕಾಗಿ ಅವರು ಪಡೆದ ಪ್ರತಿಫಲದ ಪೊತ್ತವು ರಾಜಯೋಗ್ಯವೆನ್ನುವಷ್ಟು ಅಧಿಕವಾಗಿರುವದೂ ನಿಜ. ಆದರೆ ಬರಬರುತ್ತ ಅದನ್ನೂ ಕಡಿಮೆ ಮಾಡಬಹುದು. " — " ಇವರೆಂತೂ ತಮ್ಮ ಧನಕ್ಕೆ ನಿಜವಾಗಿಯೂ ಧರ್ಮದರ್ಶಿಗಳಾಗಿ ಹೋಗಿದ್ದಾರೆ. ಅಧಿಕಾರದ ಸೂತ್ರಗಳು ಜನಸಾಮಾನ್ಯರ ಕೈಗೆ ಬರುತ್ತಲೇ ಈ ಎಲ್ಲ ಬಂಡವಲಗಾರರೂ ತಮಗೆ ಒಪ್ಪಿಸಿದ ಕೆಲಸವನ್ನು ನಿರ್ವಹಿಸಲು ಸಿದ್ಧರಾಗಿ ಪಾಲಿಗೆ ಬಂದಷ್ಟನ್ನೇ ಸ್ವೀಕರಿಸಲು ಹಿಂಜರಿಯುವದಿಲ್ಲ. ಆದರೆ ಅವರು ಗಾಬರಿಗೊಳ್ಳುವಂತೆ ನಾವು ಕೋಲಾಹಲವೆಬ್ಬಿಸಿದರೆ ಅವರೆಲ್ಲ ಒಟ್ಟಾಗಿ ಸಂಘಟಿತರಾಗಿ ನಮ್ಮ ನಾಡಿನಲ್ಲಿ ಸರ್ವಾಧಿಕಾರ ರಾಜ್ಯಪದ್ಧತಿಯನ್ನೇ ನೆಲೆಗೊಳಿಸಿ ಬಿಡುತ್ತಾರೆ. ಈಗಿನ ಸವಿನಯ ಕಾಯದೆ ಭಂಗದ ಆಂದೋಲನವನ್ನು ಕೆಲಕಾಲ ನಿಲ್ಲಿಸಿ ಸರ್ವಾಧಿಕಾರತ್ವದ ಅಡಕತೆ ನಮ್ಮ ನಾಡಿನಲ್ಲಿ ತಲೆ ಎತ್ತದಂತೆ ತಡೆಹಿಡಿದಿದ್ದೇನೆ. ಒಂದು ದೃಷ್ಟಿಯಿಂದ ಈಗಲೂ ನಮ್ಮ ದೇಶದಲ್ಲಿ ಸರ್ವಾಧಿಕಾರತ್ವವೇ ಇದೆ. ಆದರೆ ಈ ವರೆಗೆ ಸಾಕಷ್ಟು ಧನಿಕರು ಅವರಲ್ಲಿ ಸೇರಿಕೊಂಡಿಲ್ಲ. ನಾನು ಅವರ ಮಿತ್ರನೆಂದು ತಿಳಿದುಕೊಂಡ ಕುಬೇರರು ಈ ಬಗೆಯ ಸಂಘಟನೆಯಲ್ಲಿ ಸೇರಲಾರರು. ಅವರು ನನ್ನ ವಿರುದ್ಧ ಅದೆಂತು ಸಂಘಟಿತರಾಗಬಲ್ಲರು?

"ಸರ್ವಾಧಿಕಾರಿತ್ವದಿಂದ ಜನರು ಕಷ್ಟಕ್ಕೀಗುರಿಯಾಗಬೇಕು, ಹೀಗೇನಿಲ್ಲ. ನಾವು ಹಿಟ್ಲರನನ್ನು ಬದಿಗೆ ಸರಿಸಿದರೂ ಮುಸಲೋನಿಯ ಸರ್ವಾಧಿಕಾರಿತ್ವದಲ್ಲಿ ಇಟಲಿಯು ಮೊದಲಿಗಿಂತ ಖಂಡಿತ ಸುಖಸಮೃದ್ಧಿಯಲ್ಲಿದೆ. ಆ ದೇಶದಲ್ಲಿ ನಡೆದ ಸಾರ್ವಜನಿಕ ಉಪಯುಕ್ತತೆಯ ಕಾರ್ಯಗಳು ತುಂಬ ಪ್ರಶಂಸನೀಯವಾಗಿವೆ.

"ಜೀವನದ ಮಟ್ಟವೀಗ ಇಟಲಿಯಲ್ಲಿ ಸುಧಾರಿಸಿದೆ. ಆದರೇನು? ಅಲ್ಲಿ ಜನರಿಗೆ ಸ್ವಾತಂತ್ರ್ಯ ವೆಂಬುದೇ ಇಲ್ಲ. ಮುಸಲೋನಿಯನ್ನು ವಿರೋಧಿಸಿದವರು ಸಾವಿಗೆ ಔತಣ ಕೊಟ್ಟಂತೆಯೇ. ಈ ದಿನಗಳಲ್ಲಿ ಕೊಲ್ಲುವದು ಕೂಡ ಅನಾವಶ್ಯಕವೆನಿಸಿದೆ. ಜನರು ಹೊಸ ಪರಿಸ್ಥಿತಿಗೆ ಪಳಗಿಹೋಗಿ ಅದರಲ್ಲಿಯೇ ಸಂತೋಷ ಹಚ್ಚಿಕೊಳ್ಳುತ್ತಿದ್ದಾರೆ. ಅವನು ಹಿಟ್ಲರನಿಗಿಂತ ಒಳ್ಳೇ ಚಾಣಾಕ್ಷತೆಯಿಂದ ತಾನು ಸಾಧಿಸಬೇಕಾದುದನ್ನು ಸಾಧಿಸಿದ್ದಾನೆ. ಅವನ ವೈಯಕ್ತಿಕ ಜೀವನವು ತೀರ ಸರಳವೂ ನಿರಾಡಂಬರದ್ದೂ ಆಗಿದೆ. ಆದರೆ ಅವನ ಕಣ್ಣು ಬೆಕ್ಕಿನ ಕಣ್ಣು. ಅವನನ್ನು ಎದುರಿಸಿದವನ ಕಣ್ಣು ಕುಕ್ಕಿಹೋಗುತ್ತವೆ. ನಾನೇನೋ ಹಾಗೆ ಅವನ ಎದುರು ನಿಷ್ಪ್ರಭನಾಗಲಿಲ್ಲ. ಆದರೆ ಕಾಣಬಂದವರು ಭಯಭೀತರಾಗುವಂತೆ ಅವನು ತನ್ನ ಸುತ್ತು ಒಂದು ಬಗೆಯ ವ್ಯವಸ್ಥೆಯನ್ನೇ ಬಲಿದಿದ್ದಾನೆ. ಅವನನ್ನು ಕಾಣಲು ಹೋಗಬೇಕಾದ ಹಾದಿಯ ಗೋಡೆಗಳ ಮೇಲೆ ನಾನಾ ವಿಧವಾದ ಖಡ್ಗಗಳನ್ನೂ ಶಸ್ತ್ರಾಸ್ತ್ರಗಳನ್ನೂ ಅಂಟಿಸಿಡಲಾಗಿದೆ. ಅವನ ಸ್ವಂತದ ಕೋಣೆಯಲ್ಲಿ ಕೂಡ ಗೋಡೆಗಳ ಮೇಲೆ ಒಂದಾದರೂ ಚಿತ್ರವಿಲ್ಲ. ಅಲ್ಲಿ ಎಲ್ಲೆಲ್ಲಿ ನೋಡಿದರೂ ಶಸ್ತ್ರಾಸ್ತ್ರಗಳೇ. ಅವನು ತನ್ನ ಮೈಮೇಲೆ ಶಸ್ತ್ರಾಸ್ತ್ರಗಳನ್ನು ಧರಿಸಿರುವದಿಲ್ಲ. ಆದರೆ ಅವನ ಕಣ್ಣುಗಳು ಮಾತ್ರ ಸದಾ ಸುತ್ತೂ ಕಡೆಗೆ ಗರಗರ ತಿರುಗುತ್ತಿರುತ್ತವೆ. ಹೆದರಿ ಹೌಹಾರಿ ಹೋದ ಇಲಿಯು ತಾನಾಗಿ ಬೆಕ್ಕಿನ ಬಾಯಲ್ಲಿ ಹೋಗಿ ಸಿಕ್ಕು ಬೀಳುವಂತೆ, ಅವನನ್ನು ಕಾಣಹೋದವರು ಅವನ ತೀಕ್ಷ್ಣ ದೃಷ್ಟಿಗೆ ವಿನಾಕಾರಣ ಕೈಕಾಲುಗೆಟ್ಟು ಕಕ್ಕಾವಿಕ್ಕಿಯಾಗಿ ಹೋಗುವರು.

"ಇಂದು ಬಂಗಾಲದಲ್ಲಿ ಏನು ನಡೆದಿದೆ? ಅಲ್ಲಿಯ ಭಯೋತ್ಪಾದಕರ ಚಟುವಟಿಕೆಗಳನ್ನು ಹತ್ತಿಕ್ಕಲು ಅತ್ಯಂತ ಸೌಮ್ಯ ಉಪಾಯಗಳನ್ನೇ ಹೂಡುತ್ತಿದ್ದೇನೆಂದು ಎಂಡರ್ಸನ್ನರು ಹೇಳುತ್ತಾರೆ. ಆದರೆ ಈ ಸೌಮ್ಯೋಪಾಯಗಳು ಕೂಡ ಸಾಕಷ್ಟು ಪೀಡಕವಾಗಿರಬಲ್ಲವು. ಆದರೂ ಕಣ್ಣಿಗೆಕಾಣದ ಈ ಪೀಡೆಯು ಪೀಡೆಯೇ ಅಲ್ಲವೆನ್ನುವಷ್ಟು ಜನರು ನುರಗಟ್ಟಿಹೋಗಬಹುದು ಹಾಗೂ ಇಂದು ಬಂಗಾಲದ ಜನರು ಅಲ್ಲಿ ನಡೆದ ಈ ಬಗೆಯ ದಬ್ಬಾಳಿಕೆಗೆ ಪಳಗಿಹೋಗಿದ್ದಾರೆ. ದಾರ್ಜಿಲಿಂಗವು ಒಂದಾನೊಂದು ಕಾಲಕ್ಕೆ ಬಂಗಾಲಿಗಳ ಅಶ್ರಯಸ್ಥಾನವಾಗಿತ್ತು. ಅಂಗ್ರಜರು ಅಲ್ಲಿಂದ ಕಾಲ್ತೆಗೆದುಬಿಟ್ಟಿದ್ದರು. ಆದರೆ ಇಂದು ಬಂಗಾಲಿಯು ಅಲ್ಲಿ ಅಪ್ಪಣೆಯ ಚೀಟಿಯಿಲ್ಲದೆ ಕಾಲಿಡದಂತಾಗಿದೆ. ಆರ್ಥಿಕ ದೃಷ್ಟಿಯಿಂದ ಜನರು ಉಳ್ಳವರಾಗಿದ್ದರೂ ಇದೇನು ಸಮರ್ಪಕ ಜೀವನ ವಿಧಾನವಾಗಲಾರದು. ಹಿಂದುಸ್ಥಾನದಲ್ಲಿ ಈ ಬಗೆಯ ದಬ್ಬಾಳಿಕೆಯ ಸರ್ವಾಧಿಕಾರವು ನೆಲೆಗೊಳ್ಳುವ ಭೀತಿಯಿದೆ. ಧನಿಕರನ್ನು ಗೆದ್ದು ಅವರೊಡನೆ ಸ್ನೇಹ ಬೆಳೆಸಿ ಈ ಗಂಡಾಂತರವನ್ನು ತೊಲಗಿಸಬೇಕೆನ್ನುತ್ತೇನೆ.

ಅದ್ದರಿಂದ ನಾವು ಜನಸಾಮಾನ್ಯರನ್ನು ನಮ್ಮ ಕಡೆಗೆ ಒಲಿಸಿಕೊಳ್ಳಲು ಉಪಯೋಗಿಸುವ ಪ್ರತಿಯೊಂದು ಉಪಾಯವನ್ನೂ ಒಳ್ಳೆ ಎಚ್ಚರಿಕೆಯಿಂದ ಆಯ್ದುಕೊಳ್ಳಬೇಕು. ಜನಸಾಮಾನ್ಯರ ಕೈಗೆ ಆಡಳಿತಬಂದಾಗ ಮುಖಂಡತ್ವವು ನಮ್ಮ ಕಡೆಗಿದ್ದರೆ ಹಳ್ಳಿಗರ ಸಾಲಪರಿಹಾರ ಸಮಸ್ಯೆಯನ್ನು ಬಿಡಿಸಲು ಅಷ್ಟು ಕಷ್ಟವಾಗುವದಿಲ್ಲ.

ಧನಿಕ ವರ್ಗದವರು ಧರ್ಮದರ್ಶಿತ್ವವನ್ನು ಸ್ವಸಂತೋಷದಿಂದ ಸ್ವೀಕರಿಸುವರು. ನಾವು ನಮ್ಮ ಧನದ ಮತ್ತು ಶಕ್ತಿಯ ಅಪವ್ಯಯ ಮಾಡದಿದ್ದರೆ ನಮ್ಮ ದೇಶದಲ್ಲಿ ನಿಸರ್ಗವು ಹನಾಮಾನವೂ ಅತ್ಯಂತ ಅನುಕೂಲದ್ದಿರುವ ಕಾರಣ ನಾವು ಜಗತ್ತಿನಲ್ಲಿ ಎಲ್ಲರಿಗಿಂತ ಹೆಚ್ಚು ಸುಖಿಗಳಾಗಿ ಬಾಳಬಹುದು.

(ಗುಜರಾತಿಯ ಮೂಲದಿಂದ ಭಾಷಾಂತರಿತ)

ಎಸ್. ಪಿ.

## ಕಾಶ್ಮೀರವು ನಿರಂತರ ಭಾರತಕ್ಕೇ ಸೇರುವದು

ಶ್ರೀನಗರದಲ್ಲಿ ತಾ. ೧೧ರಂದು ಸೇರಿದ ಜಮ್ಮು ಮತ್ತು ಕಾಶ್ಮೀರ ರಾಷ್ಟ್ರೀಯ ಪರಿಷತ್ತಿನ ಕಾರ್ಯಕಾರಿ ಸಮಿತಿಯ ಸಭೆಯಲ್ಲಿ ಆ ಸಂಸ್ಥಾನಗಳು ಶಾಶ್ವತವಾಗಿ ಭಾರತದಲ್ಲಿಯೇ ಸೇರ್ಪಡೆ ಹೊಂದತಕ್ಕದ್ದೆಂಬುದಾಗಿ ೧೮೦೦ ಶಬ್ದಗಳ ಒಂದು ಗೊತ್ತುವಳಿ ಸ್ವೀಕರಿಸಲ್ಪಟ್ಟಿತು. ಕಾರ್ಯಸಮಿತಿಯು ಸ್ವೀಕರಿಸಿದ ಈ ಗೊತ್ತುವಳಿಯನ್ನು ತಾ ೧೪ ರಂದು ರಾಷ್ಟ್ರೀಯ ಪರಿಷತ್ತು ಪ್ರಚಂಡ ಹರ್ಷೋದ್ಗಾರದಿಂದ ಒಮ್ಮತದಿಂದ ಒಪ್ಪಿಕೊಂಡಿತು. ಈ ಹರ್ಷೋದ್ಗಾರವೂ ಕರತಾಡನವೂ ಐದು ನಿಮಿಷ ಒಂದೇ ಸವನೆ ಸಾಗಿತ್ತು. ಪ್ರತಿನಿಧಿಗಳೆಲ್ಲ ಕಾಶ್ಮೀರ ಜಿಂದಾಬಾದ, ನೆಹರೂ ಜಿಂದಾಬಾದ, ಶೇರ-ಕಾಶ್ಮೀರ ಜಿಂದಾಬಾದ ಎಂಬುದಾಗಿ ಏಕಕಂಠದಿಂದ ಘೋಷಿಸಿ ಹಿಂದುಸ್ಥಾನದಲ್ಲಿ ಕಾಶ್ಮೀರವು ಶಾಶ್ವತವಾಗಿ ಸೇರ್ಪಡೆಹೊಂದತಕ್ಕದ್ದೆಂಬ ಗೊತ್ತುವಳಿಗೆ ಒಪ್ಪಿಗೆಕೊಟ್ಟರು. ಈ ಗೊತ್ತುವಳಿಯ ಅನಂದೋನ್ಮಾದದಲ್ಲಿ ಪ್ರತಿನಿಧಿಗಳು ಸಭೆಯ ಶಿಷ್ಟಾಚಾರವನ್ನು ಗಮನಿಸದೆ ಒಬ್ಬರನ್ನೊಬ್ಬರು ಅಪ್ಪಿಕೊಂಡು ತಮ್ಮ ಸಂತೋಷವನ್ನು ಸೂಚಿಸಿದರು. ಶತ್ರು ಆಕ್ರಮಿತ ಪ್ರದೇಶಗಳಾಗಿದ್ದ ಪೂಂಚ ಮತ್ತು ಮೀರಪೂರ ಭಾಗಗಳಿಂದ ಸಹ ಪ್ರತಿನಿಧಿಗಳು ಅಲ್ಲಿಯ ಅಧಿಕಾರಿಗಳ ಕಣ್ಣಿಗೆ ಇಂಗು ಹಚ್ಚಿ ಗುಪ್ತವಾಗಿ ಬಂದು ಈ ಪರಿಷತ್ತಿನಲ್ಲಿ ಭಾಗವಹಿಸಿದ್ದರು. ಇದು ಈ ಸಭೆಯ ವೈಶಿಷ್ಟ್ಯ. ಕಾಶ್ಮೀರವು ಪಾಕಿಸ್ತಾನದಲ್ಲಿ ಸೇರ್ಪಡೆ ಹೊಂದುವದೆಂದರೆ ಇರುಳು ಬಾವಿಯಲ್ಲಿ ಹಗಲು ಬಿದ್ದಂತೆಯೇ ಸರಿ ಎಂದು ಒಬ್ಬರು ಉದ್ಗಾರ ತೆಗೆದರು. ಶೇಖ ಅಬ್ದುಲ್ಲಾರ ಮುಂದಾಳತನಕ್ಕೆ ಸಕಲರೂ ಬೆಂಬಲ ಕೊಟ್ಟರು.

## ಭೂಪಾಳಂರಿಗೆ ಪ್ರ. ಪ್ರ. ಸಭೆಯಿಂದ ನಿರ್ಯಾತನ

ಮೈಸೂರು ಪ್ರಜಾಪ್ರತಿನಿಧಿ ಸಭೆಯ ಅಧ್ಯಕ್ಷರು ಯಾವ ಕಾರಣಕೊಡದೆ ಕೆಲವು ನಿಲುವಳಿ ಸೂಚನೆಗಳನ್ನು ತಳ್ಳಿಹಾಕಿದ್ದರಿಂದ ಸಭೆಯ ಹಕ್ಕುಬಾಧ್ಯತೆಗಳಿಗೆ ಲೋಪ ಬಂದಿದೆ. ಇದನ್ನು ಚರ್ಚಿಸಬೇಕೆಂದು ಶ್ರೀ ಭೋಪಾಳಂರು ಸೂಚನೆಯನ್ನು ತರಲು ಅಧ್ಯಕ್ಷರು ಒಪ್ಪಲಿಲ್ಲ. ಭೂಪಾಳಂರು ಈ ಸೂಚನೆಯನ್ನು ಚರ್ಚಿಸಲು ಅನುಮತಿ ಕೊಡಲು ಅಧ್ಯಕ್ಷರಿಗೆ ಅಧಿಕಾರವಿದೆಂದರೂ ಅಧ್ಯಕ್ಷರು ಸಮ್ಮತಿಸಲಿಲ್ಲ. ಕೊನೆಗೂ ಭೂಪಾಳಂರು ಆಗ್ರಹ ತೊಟ್ಟಿದ್ದರಿಂದ ಅಧ್ಯಕ್ಷರು ಅವರಿಗೆ ಸಭೆಯಿಂದ ಹೊರಟು ಹೋಗಲು ತಿಳಿಸಿದರು. ಭೂಪಾಳಂರು ಅಧ್ಯಕ್ಷರ ವರ್ತನೆಯನ್ನು ಟೀಕಿಸುತ್ತ ಹೊರಗೆ ಹೋದರು.

## ನಿಜಾಮರ ವಿಲಾಸಿ ಉಗೆಬಂಡಿ

ನಿಜಾಮರು ತಮ್ಮ ಸ್ವಂತ ವಿಲಾಸಿ ಉಗೆಬಂಡಿಯನ್ನು ಹೈದರಾಬಾದ ಮಿಲಿಟರಿ ಗವರ್ನರರಿಗೆ ಶಾಂತತಾಪ್ರಸ್ಥಾಪನೆಗಾಗಿ ಜಿಲ್ಲಾ ಸಂಚಾರಗಳನ್ನು ಕೈಕೊಂಡಾಗ ಉಪಯೋಗಿಸಿಕೊಳ್ಳುವದಕ್ಕಾಗಿ ಕೊಟ್ಟಿರುವರು. ನಿಜಾಮರು ೯ ವರುಷಗಳ ಹಿಂದೆ ಕಲಕತ್ತೆಯಲ್ಲಿ ವೈಸರಾಯರನ್ನು ಭೆಟ್ಟಿಯಾಗಲು ಹೋದಾಗ ಮಾತ್ರ ಈ ಉಗೆಬಂಡಿಯನ್ನು ಉಪಯೋಗಿಸಿದ್ದರು ಮುಂದೆ ಉಪಯೋಗಿಸಿಲ್ಲ. ಮಿಲಿಟರಿ ಗವರ್ನರರು ಬರುವ ವಾರದಲ್ಲಿ ರಾಯಚೂರ ಜಿಲ್ಲಾ ಸಂಚಾರವನ್ನು ಕೈಕೊಂಡಾಗ ಈ ಉಗೆಬಂಡಿಯನ್ನು ಉಪಯೋಗಿಸಿಕೊಳ್ಳಬಹುದು.

# ಮಹಿಳಾ-ಲೋಕ

## ಸ್ತ್ರೀ-ಪುರುಷರ ಏಕವ್ಯಕ್ತಿತ್ವ

ಇಂದು ಪಟ್ಟಣದ [illegible] ಎಲ್ಲಿ ನೋಡಿದರೂ ಮದುವೆಯ [illegible]. ಬಾಳಿ ಮದುವೆಯಾಗಿ ಗಂಡನ ಅಳಾಗಿಸಾಳ ಬೇಕು? ಎಂಬ ಅಜ್ಞಾನಜನ್ಯ ವಾಕ್ಯಗಳು ಅವರ ಬಾಯಿಂದ ಅಲ್ಲಲ್ಲಿ ಕೇಳಬರುತ್ತಿವೆ. ಇದಕ್ಕೆ ಇಂದಿನ ನಮ್ಮಲ್ಲಿಯ ಕುಟುಂಬ ಜೀವನದಲ್ಲಿ ಆಗಿರುವ ವಿಪರ್ಯಸ್ತ ಪರಿಸ್ಥಿತಿಯು ಕಾರಣ.

ಜನತೆಯ ಧ್ಯೇಯ ಮತ್ತು ಆದರ್ಶಗಳ ಮೇಲೆ ವ್ಯಕ್ತಿಯ ಸದ್ಗುಣ ದುರ್ಗುಣಗಳು ಬಹುಮಟ್ಟಿಗೆ ಅವಲಂಬಿಸಿರುತ್ತವೆ. ಗಂಡ ಹೆಂಡಿರಲ್ಲಿ ಐಕಮತ್ಯವಿಲ್ಲದಲ್ಲಿ ಯಾವ ಐಶ್ವರ್ಯ ಎಷ್ಟಿದ್ದರೂ ವ್ಯರ್ಥವೇ ಸರಿ. ಕಾಡಿನಲ್ಲಿ ಕೂಡ ರಾಮ ಸೀತೆಯರು ಸಂಪೂರ್ಣ ಪ್ರೀತಿ ಶಾಂತಿಗಳಿಂದ ಬಾಳಲು ಶಕ್ತರಾದುದು ಇದಕ್ಕೊಂದು ಅತ್ಯುತ್ತಮ ಉದಾಹರಣೆ. ಇದಕ್ಕೆ ಅವರಿಬ್ಬರು ಪರಸ್ಪರ ಶುದ್ಧಮನಸ್ಕರೂ ಬಿಚ್ಚಿದೆಯವರೂ ಆಗಿದ್ದೇ ಕಾರಣ.

ಗಂಡಸು ಹೆಂಗಸು ಸೇರಿ ಒಂದು ವ್ಯಕ್ತಿ, ಒಂದು ಕುಟುಂಬ, ಒಂದು ಮನೆ. ಅವರು ಪರಸ್ಪರ ಪೂರಕರು; ಒಬ್ಬರಿಲ್ಲದೆ ಇನ್ನೊಬ್ಬರ ಬಾಳು ರಸವತ್ತಾಗದೆಂದು ಇತಿಹಾಸಾದಿಯಿಂದ ಇಂದಿನ ವರೆಗೆ ಅವರಿಬ್ಬರಿಗೂ ಅನುಭವಕ್ಕೆ ಬಂದಿದೆ. ಸ್ತ್ರೀಪುರುಷರ ನಿಜವಾದ ಏಕವ್ಯಕ್ತಿತ್ವಕ್ಕೆ ಅರ್ಧನಾರೀಶ್ವರತ್ವದ ಚಿತ್ರವನ್ನು ಉಪನಿಷದಾದಿಗ್ರಂಥಗಳು ಉದಾಹರಣೆಯಾಗಿ ಕೊಟ್ಟಿವೆ. ಇದೇ ಹಿಂದು ಆದರ್ಶ, ಸತ್ಯವೂ ನ್ಯಾಯವೂ ಆದ ಸ್ತ್ರೀಪುರುಷ ಸಂಬಂಧ ಎಂಬುದನ್ನು ಕುಮಾರಿ ಕಮಲರಾಣಿ ಆನಂದ ಎಂ. ಎ. ಅವರು ಬರೆಯುವಾಗ ಮದುವೆಯಲ್ಲಿ ಗಂಡು ಹೆಣ್ಣಿಗೆ ಹೇಳುವ 'ಯದೇತದ್ ಹೃದಯಂ ತವ ತದಸ್ತು ಹೃದಯಂ ಮಮ ಯದೇತದ್ ಹೃದಯಂ ಮಮ ತದಸ್ತು ಹೃದಯಂ ತವ-ನಿನ್ನ ಈ ಹೃದಯ ನನ್ನದಾಗಲಿ, ಈ ನನ್ನ ಹೃದಯ ನಿನ್ನದಾಗಲಿ' ಎಂದು ಹೇಳುವದನ್ನು ಉದಾಹರಿಸುತ್ತಾರೆ. ಈ ಆದರ್ಶವನ್ನು ಪತಿಪತ್ನಿಯರು ಹಿಡಿಯದಿದ್ದರೆ ಅವರು ನಾಗರಿಕರೆನಿಸಿ ಕುಟುಂಬಜೀವನವನ್ನು ನಡೆಸಲು ಸಾಧ್ಯವೇ ಇಲ್ಲವಾದುದರಿಂದ ಇಂಥ ಆದರ್ಶದ ಅನುಯಾಯಿಗಳಲ್ಲಿ ಸ್ವಾಮಿಭೃತ್ಯಭಾವ ಸಂಬಂಧ ಇರಲು ಕಾರಣವೇ ಇಲ್ಲ ಎಂಬದನ್ನು ಗಂಡಸು ಮತ್ತು ಹೆಂಗಸು ಇಬ್ಬರೂ ಅರಿತು ಆಚರಿಸುವದು ಅತ್ಯಂತ ಅಗತ್ಯವಾಗಿದೆ. ಸ್ವಾಮಿಭೃತ್ಯಭಾವ ಪಾಶ್ಚಾತ್ಯ ಪ್ರಪಂಚದಲ್ಲಿಯ ಪರದೇಶದ್ದು, ಭಾರತೀಯೇತರ; ಏಕೆಂದರೆ ದಂಪತಿಗಳು ಸರ್ವಕೌಟುಂಬಿಕ ಕಾರ್ಯಗಳನ್ನೂ ಒಟ್ಟಿಗೇ ಮಾಡಬೇಕೆಂದು 'ಸಹ ಧರ್ಮ ಚರತಂ' ಎಂಬ ಆದರ್ಶವನ್ನು ನಮ್ಮ ಹಿರಿಯರು ನಮಗೆ ತೋರಿಸಿದ್ದಾರೆ. ಹಿಂದು ಸಂಸ್ಕೃತಿಯಲ್ಲಿ ಸ್ತ್ರೀಪುರುಷರಿಗೆ ಪ್ರತ್ಯೇಕ ಹಕ್ಕೆಂಬುದೇ ಇಲ್ಲ. ಏಕೆಂದರೆ, ಭಾರತೀಯ ಆದರ್ಶಗಳಾದ ಧರ್ಮ, ಅರ್ಥ, ಕಾಮ, ಮೋಕ್ಷ ಈ ಚತುರ್ವರ್ಗವನ್ನು ಗಂಡು ಹೆಣ್ಣು ಕೂಡಿಯೇ ಸಾಧಿಸಬಲ್ಲರೆಂಬುದು ನಿರ್ವಿವಾದವಾದ ಸಂಗತಿ. ಆದುದರಿಂದ ಸ್ತ್ರೀ ಪುರುಷರ ಹಕ್ಕಿನ ಸ್ಪರ್ಧೆಯನ್ನು ಪಾಶ್ಚಾತ್ಯರಿಂದ ಸ್ವೀಕರಿಸಿ ಅಧೋಗತಿಗಿಳಿಯದೆ ವಿಚಾರಶೀಲೆಯರಾದ ನಮ್ಮ ಅಕ್ಕ ತಂಗಿಯರು ಮತ್ತು ಉದಾರಿಗಳಾದ ನಮ್ಮ ಅಣ್ಣ ತಮ್ಮಂದಿರು ಪರಸ್ಪರ ಬಾಳಿನ ಪೂರಕರಾಗಲು ಪರಸ್ಪರ ಸಾಮ್ಯ, ಹೃದಯದ ಐಕ್ಯಗಳನ್ನು ವಿದ್ಯೆ ಬುದ್ಧಿ, ಗುಣ, ನಡತೆ, ಶಿಸ್ತು, ಕರ್ತವ್ಯ ಕ್ಷೇತ್ರಗಳಲ್ಲಿ ಸಾಧಿಸಿಕೊಳ್ಳುವದು ಸ್ತ್ರೀಪುರುಷರ ವ್ಯಕ್ತಿತ್ವವನ್ನು ಪೋಷಿಸಬಲ್ಲದು. ಅದಕ್ಕಾಗಿ ಸಾಮಾಜಿಕ ಆರ್ಥಿಕ ಮುಂತಾದ ಸರ್ವಕ್ಷೇತ್ರಗಳಲ್ಲಿ ಸ್ತ್ರೀಪುರುಷರಿಗೆ ವೈಯಕ್ತಿಕ ಯೋಗ್ಯತೆಯಂತೆ, ಪರಸ್ಪರ ಹಿತೇಚ್ಛೆಯಂತೆ ಕುಟುಂಬಜೀವನದಲ್ಲಿ ಸಾರ್ಥಕತೆ ಹೊಂದಲು ಅವಕಾಶವಿರಬೇಕೆಂಬವನ್ನು, ಕಾಯದೆಯಲ್ಲಿ ಸುಧಾರಣೆಯಾಗಬೇಕೆಂಬವರೂ ಮದುವೆಯಾಗುವವರೆ ಬದಲು ಬ್ರಹ್ಮಚಾರಿಣಿಯರೆಂದು ಹೇಳಿಕೊಂಡು ದುರಾಚಾರಕ್ಕೆ ಅವಕಾಶ ತಂದುಕೊಳ್ಳುವ ಅಜ್ಞಾನಿಗಳೂ ಮುಂದಟ್ಟು ಮಾಡಿಕೊಳ್ಳಬೇಕು.

—ಹಿರಿಯಕ್ಕ

## ಮಾತಿನ ಶಕ್ತಿ

ಮಕ್ಕಳು ಹೇಗೋ ಹಾಗೇ ಮಕ್ಕಳ ಅಕ್ಕ ತಂಗಿಯರೂ ತಾಯಂದಿರೂ ಆದ ನಾವು ಮಾತಾಳಿಗಳೆಂದು ಹೆಸರಾಗಿದ್ದೇವೆ. ಆದರೆ ನಮ್ಮಲ್ಲಿ [illegible] ಕಾತರೆ ಕಲ್ಪನೆ ಹಾಗೆ, ಬಾಯ್ಬಿ[illegible] ಪಶಕಂಠನ ಹಾಗೆ ಸಂಬಂಧಿರುವವರೇ [illegible] ಮಾತು ಎಂದು ಕೊಂಬವರು ಒಬ್ಬರು. ಮೂಕಿ ಮತ್ತು ಸಂಪೂರ್ಣ ವಿದ್ಯಾವತಿ; ಒಬ್ಬಳದು ತಪ್ಪುತಿಳಿವಳಿಕೆ, ಇನ್ನೊಬ್ಬಳು ಸರಿಯಾದ ಭಾವನೆ-ಇಷ್ಟೇ ಭೇದ.

ಶಾಲೆಯಲ್ಲಿ ಹುಡುಗ ಹುಡುಗಿಯರಿಗೆ ಈಗೀಗ ಚರ್ಚೆಯಿಂದ ವಿಚಾರ ವಿನಿಮಯ ಮಾಡಿ ಸ್ನೇಹದಿಂದ ಸತ್ಯಾಸತ್ಯವನ್ನರಿವ ನಾಗರಿಕ ಸಾಧನವನ್ನು ಹೇಳಿಕೊಡಲಾಗುತ್ತಿದೆಯಾದರೂ ಅದರಿಂದ ಸಾಕಷ್ಟು ಲಾಭ ಪಡೆವವಳು ನೂರರಲ್ಲಿ ಒಬ್ಬಳೂ ಇರುವಳೆಂಬ ಧೈರ್ಯ ನನಗಿಲ್ಲ.

ಹಿಂದಿನವರು ಮಾತಿಗೆ ಸರಸ್ವತಿಯನ್ನೇ ಅಧಿದೇವತೆಯನ್ನಾಗಿ ಮಾಡಿದ್ದು ನಿಜ. ಅದರಿಂದ ನಮ್ಮವರೆಲ್ಲ ಲಿಂಗಾಧ್ಯಾಸದಿಂದ ಜಾತಿಪ್ರಾಧಾನ್ಯಕ್ಕಾಗಿ ಬಹಳ ಹೆಮ್ಮೆ ಪಟ್ಟುಕೊಂಡರು. ಆದರೆ ನಮ್ಮವರಲ್ಲಿ ತಿಳಿವಳಿಕೆ ಕಡಿಮೆ ಎಂಬದಕ್ಕೆ ಇದೇ ಪ್ರಥಮ ನಿದರ್ಶನ. ಸರಸ್ವತಿ ಹೆಂಗಸಾದ್ದರಿಂದ ಗಂಡಸರಿಗೆ ಒಲಿದಳಲ್ಲದೆ ನಮಗೆ ಒಲಿದದ್ದು ಬಹಳ ಸ್ವಲ್ಪ! ಜಾತೀಯ ಭಾವನೆ ಜಗತ್ತಿನ ಎಲ್ಲ ವರ್ಗಗಳಲ್ಲೂ ಉಳಿದರೆ ಉಳಿಯಬಹುದು; ಆದರೆ ಗಂಡಸರು ಮತ್ತು ಹೆಂಗಸರಲ್ಲಿ ಉಳಿಯಲು ಸಾಧ್ಯವೇ ಇಲ್ಲ. ಉಳಿದರೆ ಮಾನವ ಕುಲ ನಾಮಶೇಷವಾಗುವದಿಲ್ಲವೆ? ಆದ್ದರಿಂದ ನಮಗೆ ಮಾತು ಒಲಿಯಬೇಕಾದರೆ ಗಂಡಸರ ಉಪಾಯವನ್ನೇ ಕೈಕೊಂಡು, ಸರಸ್ವತಿಯನ್ನೇ ಸೃಷ್ಟಿಸಿದ ಅವಳ ಗಂಡನಾದ ಬ್ರಹ್ಮನನ್ನೇ ಒಲಿಸಿಕೊಂಡರೆ ನಾವು ಗೆಲ್ಲಬಹುದಲ್ಲವೆ? ಅದೇ ಈಗ ನಾವು ಕೈಕೊಳ್ಳಬೇಕಾದ ವ್ರತ.

ಹೆಂಗಸರು ಭಾವನಾಪ್ರಧಾನರೆಂದೂ ಅವರು ಪ್ರೇಮಶಕ್ತಿವಂತರಲ್ಲದೆ ಜ್ಞಾನಶಕ್ತಿವಂತರಲ್ಲವೆಂದೂ ಹೇಳುವುದು ರೂಢಿ. ಆದರೆ ನಮ್ಮಲ್ಲಿ ಎರಡರಲ್ಲಿ ಒಂದು ಶಕ್ತಿಯನ್ನೂ [illegible] ಇಂದಿನ ಹುಡುಗ ಹುಡುಗಿಯರು [illegible] ಭಾವನೆಗಳನ್ನು [illegible] ಜ್ಞಾನದೇವತೆ ತಿಳಿದು [illegible] ಬರುತ್ತಾರೆ. ಹೀಗೆ [illegible] ನಿಜವಾದ ನಾಗರಿಕ ಜೀವನದಲ್ಲಿ ಗಂಡು ಹೆಣ್ಣೆಂಬ ಭೇದ ಕೇವಲ ದೈಹಿಕ ವ್ಯಾಪಾರದಲ್ಲಲ್ಲದೆ ಅಂತರಿಕ ವ್ಯವಹಾರದಲ್ಲ [illegible] ಜ್ಞಾನ ಪ್ರೇಮಗಳು ಮಿಶ್ರ [illegible] ಸ್ವತ್ತೆಂದು ತಿಳಿದು ಕೊಳ್ಳುವುದು [illegible] ಪದಾರ್ಥ. ಒಂದು ಹೆಚ್ಚು ಆ ದೂರಿನಲ್ಲಿ [illegible] ಯನ್ನಾದರೂ ಸತ್ಯಾಂಶ ಇದ್ದರೆ ಅದನ್ನು ಒಳ್ಳೆಯ ರೀತಿಯಲ್ಲಿ ಬಳಸಿಕೊಳ್ಳಬೇಕು. ತಂತಮ್ಮ ಸ್ವಾಭಾವಿಕ ಶಕ್ತಿಗಳನ್ನು ಬೆಳೆಸಿಕೊಂಡು ಅನಂತರ ತಮ್ಮಲ್ಲಿಲ್ಲದ ಕಾರಣದಿಂದ ತಮಗೆ ಅಗತ್ಯವೂ ಪ್ರಿಯವೂ ಆದ ಪರಸ್ಪರರ ಗುಣಗಳನ್ನು ತರುಣ ತರುಣಿಯರು ಕಲಿತುಕೊಳ್ಳುವುದು ಬುದ್ಧಿವಂತರ, ನಾಗರಿಕರ ರಸಿಕರ ಪ್ರಯೋಜನದೃಷ್ಟಿಯುಳ್ಳವರ ಧ್ಯೇಯವೆಂದು ಹೇಳಬಹುದಲ್ಲವೆ? ಪ್ರೇಮ ಜ್ಞಾನಗಳನ್ನು ಧರ್ಮ ವಿಜ್ಞಾನಗಳಿಗೆ ಹೋಲಿಸಿದರೆ ಜಗತ್ಪ್ರಸಿದ್ಧ ಜ್ಞಾನಿಯೂ ತತ್ವಜ್ಞನೂ ಆದ ಐನ್‌ಸ್ಟೀನನ ವಾಕ್ಯವನ್ನು ಹೀಗೆ ಅನ್ವಯಿಸಿ ಹೇಳಬಹುದು.

"ಪ್ರೇಮವಿಲ್ಲದ ಜ್ಞಾನ ಕುಂಟು, ಜ್ಞಾನವಿಲ್ಲದ ಪ್ರೇಮ ಕುರುಡು!" ಎಂದು.

ಕಲೆಗಳಲ್ಲಿ ಈ ಭಾವನೆ ಬುದ್ಧಿಗಳೆರಡರ ಸಮನ್ವಯವಿರುವ ಉತ್ತಮ ಕಲೆಯೆಂದರೆ ಸಾಹಿತ್ಯ. ಸಾಹಿತ್ಯಾಭ್ಯಾಸವಿಲ್ಲದುದರಿಂದಲೇ ಗಂಡಸರ ರಸಿಕತೆ ಹೆಂಗಸರಿಗಿಲ್ಲದಂತಾಯ್ತು. ರಸಿಕತೆಯಿಲ್ಲದವರಿಗೆ ಜೀವನ ಪ್ರಾಪಂಚಿಕವಿರಲಿ, ಕಾಲ್ಪನಿಕವಿರಲಿ, ಯಾವ ಸುಖವನ್ನೂ ಸಂಪೂರ್ಣವಾಗಿ ಸ್ವತಂತ್ರವಾಗಿ, ಶುದ್ಧವಾಗಿ ಅನುಭವಿಸುವ ಶಕ್ತಿಯೇ ಬೆಳೆಯುವುದಿಲ್ಲವೆಂದು ನನ್ನ ಅನುಭವ. ಸಾಹಿತ್ಯದಲ್ಲಿ ಜ್ಞಾನ ಪ್ರೇಮಗಳ ಸಾಮರಸ್ಯವಿರುವುದರಿಂದಲೇ ಜಗತ್ತಿನ ಕಥಾನಾಯಕರ ಸಮರಸ ಜೀವನದ ಆದರ್ಶ ಕಥಾನಾಯಿಕೆಯರಲ್ಲಿಲ್ಲ, ಕೇವಲ ಅತಿರೇಕದ ಆದರ್ಶವನ್ನು ಮಾತ್ರ ಅಲ್ಲಲ್ಲಿ ಕಾಣಬಹುದು. ಅತಿರೇಕವು ದೂರದಲ್ಲಿ ನಿಂತು ನೋಡುವ ಚೆಂದವಲ್ಲದೆ ಜೀವನದಲ್ಲಿ ಆನಂದ ಕೊಡತಕ್ಕದ್ದಲ್ಲ. ಅತಿರೇಕ ಮೇಲ್ಮಟ್ಟದ್ದಾದರೆ ದೈವಿ ಎಂದೂ ಕೆಳಮಟ್ಟದ್ದಾದರೆ ರಾಕ್ಷಸೀ ಎಂದೂ ಆಗುತ್ತದೆ. ಮಾನವ್ಯ ಜೀವನದ ಸವಿ ಇರುವುದು ಮಧ್ಯಮದಲ್ಲೇ. ಮಾನವರಾಗಿರುವ ಪ್ರವೃತ್ತಿ

—[illegible] ನೆಯ ಪುಟಕ್ಕೆ

ಯುದ್ಧೋತ್ತರ ಮಹಿಳಾ ಸಹಾಯಕ ಸೈನ್ಯದ ತರಬೇತು ಹೊಂದಿದ [illegible]

[illegible]

[illegible]

[ ... [illegible] ]

[illegible]

(೧) [illegible]

[illegible]

(೨) ಬಟಾಟಿ ಸಿರಾ

[illegible]

(೩) [illegible]

[illegible]

[illegible] ಪುಟಕ್ಕೆ

# ವಾರದ ಭವಿಷ್ಯ

ಜ್ಯೋತಿಷಿ- ಕೃಷ್ಣಶಾಸ್ತ್ರಿ ಭಿಡೆ ಭವಿಷ್ಯಕಥನ ಆಫೀಸ ಖಡೇಬಝಾರ, ಬೆಳಗಾವಿ

## ಅಕ್ಟೋಬರ ೨೫ ರಿಂದ ೩೧ ರ ವರೆಗೆ

### ಮೇಷ

ಚಿತ್ತ ಪ್ರಕೋಪದಿಂದ ಸ್ವತಃ ನಿಮಗೆ ತಲೆ ತಿರುಗುವದು, ಮೂರ್ಛೆ, ಮತ್ತು ವಾಂತಿಯ ಭಯ. ಆದರೆ ಹೆಂಡತಿಗೆ ಅಜೀರ್ಣ ಇಲ್ಲವೆ ಉಪವಾಸದ ಕಾರಣದಿಂದ ಜುಲಾಬ ಇಲ್ಲವೆ ಭೇದಿಯಾಗುವ ಭೀತಿ. ಮಕ್ಕಳುಮರಿಗಳ ಆರೋಗ್ಯ ಅನುಕೂಲ. ಆದರೆ ಕೆಲ ಜನರು ತಲೆ ತಿರುಕರಂತೆ ವರ್ತಿಸುವದರಿಂದ ಚಿತ್ತಕ್ಷೋಭ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಅನುಕೂಲ. ಮನೆಯಲ್ಲಿ ಇಲ್ಲವೆ ಆಸ್ತಿಯಲ್ಲಿ ಮನಸ್ಸಿಗೆ ಬರುವಂಥ ಘಟನೆಗಳು ಇಲ್ಲವೆ ಸುಧಾರಣೆಗಳು. ಜಡಬುದ್ಧಿಯ ವಿದ್ಯಾರ್ಥಿಗಳಿಗೆ ವಿದ್ಯೆಯಲ್ಲಿ ಯಶಸ್ಸು. ಆದರೆ ತೈಲಬುದ್ಧಿಯುವರಿಗೆ ಅಪಯಶಸ್ಸಿನ ಸಂಭವ. ಉದ್ಯೋಗದಲ್ಲಿ ಪ್ರತಿಷ್ಠೆಗೆ ಕುಂದು. ಆದರೆ ಪ್ರಗತಿ ಮತ್ತು ಲಾಭ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು. ಆದರೆ ಸಲಹೆಗಾರರು ಸ್ವಾರ್ಥ ಹೇತುವಿನಿಂದ ಬುದ್ಧಿಭೇದ ಮಾಡಿ ಏನೇನೋ ಅಂಜಿಕೆ ಹಾಕಿಡುವರು. ಪ್ರವಾಸ ಸುಖಕರ, ಭೆಟ್ಟಿಯ ಕೆಲಸ ಅನಿಶ್ಚಿತ ಮತ್ತು ಪತ್ರವ್ಯವಹಾರ ಅತಿ ಗೊಂದಲದ್ದು. ಭರಣಿಗೆ ತೊಂದರೆ ಕಡಮೆ. ತಾ. ೨೫, ೨೬, ೨೮ ಅನುಕೂಲ.

### ವೃಷಭ

ಪ್ರಕೃತಿ ಮತ್ತು ಸ್ತ್ರೀಸುಖ ಅನುಕೂಲ. ಬಂಧು ವರ್ಗದವರಲ್ಲಿ ಮತ್ತು ಮಕ್ಕಳಲ್ಲಿ ಉನ್ನತಿ. ಆದರೆ ಮನೆಯಲ್ಲಿಯ ಹಿರಿಯ ಜನರು ನಿರರ್ಥಕವಾಗಿ ಸಿಟ್ಟಿಗೇಳುವರು. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಉತ್ತಮ. ಕೆಲ ಪ್ರಿಯ ಅತಿಥಿಗಳು ಬಂದು ಕೆಲ ಗಳಿಗೆ ಸಂದಿದೆಯೊ ಇಲ್ಲವೊ ಇಷ್ಟರಲ್ಲಿಯೆ ಒಬ್ಬ ಅಪ್ರಿಯ ಅತಿಥಿಯು ಒಳ್ಳೆ ಥಾಟನಿಂದ ಮನೆಯಲ್ಲಿ ನುಗ್ಗುವ ಸಂಭವ. ಸ್ಥಾವರದಲ್ಲಿ ಹೆಚ್ಚಳ. ಆದರೆ ಉತ್ಪನ್ನದಲ್ಲಿ ಕೆಲಮಟ್ಟಿಗೆ ಹಾನಿ, ಉದ್ಯೋಗಕ್ಕಿಂತ ಲಾಟರಿ, ಸಟ್ಟಾ, ಕುದುರೆ ಜೂಜು ಮೊದಲಾದ ಗುಪ್ತ ಮಾರ್ಗಗಳಿಂದ ಪ್ರತ್ಯಕ್ಷವಾಗಿ ದ್ರವ್ಯ ತೆಗೆಯಬಯಸುವವರಿಗೆ ದ್ರವ್ಯ ಲಾಭ ಹೆಚ್ಚು. ಧಂದೆದವರಿಗಿಂತ ನೋಕರದಾರರಿಗೆ ತೊಂದರೆ ಕಡಮೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು. ಅನುಕೂಲ. ಆದರೆ ಶತ್ರುಗಳ ಬುಡಬುಡು ಹೆಚ್ಚೀ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಅನುಕೂಲ. ರೋಹಿಣಿಗೆ ತೊಂದರೆ ಕಡಮೆ. ತಾ. ೨೫, ೨೬, ೨೯, ೩೦ ಅನುಕೂಲ.

### ಮಿಥುನ

ಮಕ್ಕಳುಮರಿಗಳಿಗೆ ಸ್ವಲ್ಪ ಕ್ಲೇಶ. ಆದರೆ ಉಳಿದವರ ಆರೋಗ್ಯ ಉತ್ತಮ ಮತ್ತು ಪ್ರಾಪಂಚಿಕ. ಸುಖ ಉತ್ಸಾಹವರ್ಧಕ ಪ್ರಿಯ ಜನರ ಸಹವಾಸ. ಬಗೆ ಬಗೆಯ ಆನಂದದಲ್ಲಿ ನಿರತನಾಗುವ ಸುಯೋಗ. ಸ್ಥಾವರದಲ್ಲಿ ಹೆಚ್ಚಳ. ಆಪ್ತರು ಮತ್ತು ನೆರೆಯವರು ವಿಶೇಷ ಆದರ ಮಾಡುವರು. ವಾಹನ ಸುಖ. ಉದ್ಯೋಗದಲ್ಲಿ ಮಾತ್ರ ಪ್ರಗತಿ ಮತ್ತು ಪ್ರತಿಷ್ಠೆ ಬಹಳ ಉತ್ತಮ. ಆದರೆ ಆ ಮಾನದಿಂದ ಲಾಭ ಕಡಮೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಶತ್ರುಪೂರ್ಣ ಪರಾಜಯ ಹೊಂದುವಷ್ಟು ಯಶಸ್ಸು. ಆದರೆ ಮಿತ್ರರೊಡನೆ! ಬೇಕೆಂತಲೆ ಇಲ್ಲವೆ ತಿಳಿಯದಲೆ ವಿರೋಧ ಉಂಟಾಗುವಂಥ ಕೆಲ ಸಂಗತಿಗಳು ಸಂಭವಿಸುವ ಯೋಗ. ಪ್ರವಾಸಾದಿ ಕೆಲಸ ಹಿತದ್ದು. ಆದರೆ ಆರಿದ್ರಾಕ್ಕೆ ಹೆಚ್ಚು ಅನುಕೂಲ. ತಾ. ೨೫, ೨೬, ೨೭, ೩೮ ಅನುಕೂಲ.

### ಕರ್ಕ

ನಿಮ್ಮ ಪ್ರಕೃತಿ ಅನುಕೂಲ. ಆದರೆ ಹೆಂಡತಿಗೆ ಕ್ಲೇಶ. ಬಹುತರ ವಿಷಯಗಳಲ್ಲಿ ಪ್ರಾಪಂಚಿಕ ತೊಂದರೆಯೇ. ಬಂಧುವರ್ಗದವರಲ್ಲಿ ಮತ್ತು ಮಕ್ಕಳುಮರಿಗಳಲ್ಲಿ ಆಗುವ ಉನ್ನತಿ ಸ್ವಾಃಕ್ಕೆ ಬಹಳ ಅಸ್ವಸ್ಥತೆಯುಂಟುಮಾಡುವಂತಹದು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಅನುಕೂಲ. ಆದರೆ ಪ್ರತಿಯೊಂದು ಸಂಗತಿ ವಿಪರೀತ ಹೊಣೆಗಾರಿಕೆ ಎನಿಸುವಂತಹದು. ಧಂದೆಯುವರಿಗಿಂತ ನೋಕರ ವರ್ಗದವರಿಗೆ ಕೆಲ ಮಟ್ಟಿಗೆ ಅನುಕೂಲ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಪ್ರತಿಕೂಲತೆ. ಮತ್ತು ಶತ್ರುಗಳು ಬಗೆಬಗೆಯ ಪ್ರಯತ್ನಗಳಿಂದ ತೊಂದರೆ ಕೊಡುವ ಪ್ರಯತ್ನ ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಕೆಲ ಮಟ್ಟಿಗೆ ಅನುಕೂಲ. ಪುಷ್ಯಕ್ಕೆ ಹೆಚ್ಚು ತೊಂದರೆ. ತಾ. ೨೫, ೨೬, ೩೦ ಅನುಕೂಲ.

### ಸಿಂಹ

ನಿಮ್ಮಕ್ಕಿಂತ ಹೆಂಡತಿ ಮತ್ತು ಮಕ್ಕಳುಮರಿಗಳ ಪ್ರಕೃತಿ ಹೆಚ್ಚು ಅನುಕೂಲ. ಪ್ರಾಪಂಚಿಕ ಸುಖ ಮನಸ್ಸಿನಂತೆ ಆದರೂ ಮನಸ್ಸಿನಲ್ಲಿ ವಿಪರೀತ ಸಂಗತಿಗಳ ರಖರಖಿ ಹತ್ತಿದ್ದೆ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಅನುಕೂಲ. ಆದರೆ ಬಹಳ ವೆಚ್ಚ ಮಾಡಬೇಕಾದ ಅಪರಿಹಾರ್ಯ ಪ್ರಸಂಗ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲತೆ. ಮನೆಯ ನೋಕರರು ಓಕರಿಕೆ ಬರುವಷ್ಟು ತಲೆತಿರುಕತನ ಮಾಡುವರು. ಪ್ರವಾಸಾದಿ ಕೆಲಸ ಹಿತದ್ದು. ಪೂರ್ವಾಕ್ಕೆ ತೊಂದರೆ ಕಡಮೆ. ತಾ. ೨೮, ೨೯, ೩೦, ೩೧ ಅನುಕೂಲ.

### ಕನ್ಯಾ

ನಿಮ್ಮ ಮತ್ತು ಹೆಂಡತಿಯ ಪ್ರಕೃತಿ ಅನುಕೂಲ. ಆದರೆ ಮಕ್ಕಳು ಮತ್ತು ನೋಕರರ ಪ್ರಕೃತಿ ಬಹಳ ಕೆಡುವದು ಮತ್ತು ಅದರಿಂದ ಯೋಜಿಸಿದ ಕೆಲವೊಂದು ಸಮಾರಂಭದ ವಿಷಯಗಳಲ್ಲಿ ಗೊಂದಲ. ಉದ್ಯೋಗದಲ್ಲಿ ಪ್ರಗತಿ ಕಡಮೆ. ಆದರೆ ಪ್ರತಿಷ್ಠೆ ಮತ್ತು ಲಾಭ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ. ಪ್ರವಾಸ ತೊಂದರೆಯದು. ಆದರೆ ಭೆಟ್ಟಿ ಮತ್ತು ಪತ್ರವ್ಯವಹಾರ ಉತ್ತಮ. ಹಸ್ತಾಕ್ಕೆ ತೊಂದರೆ ಕಡಮೆ. ತಾ. ೨೫, ೨೬, ೨೯, ೩೦ ಅನುಕೂಲ.

### ತುಲಾ

ಪ್ರಕೃತಿ ಉತ್ತಮ ಹೆಂಡತಿ ಮತ್ತು ಪ್ರಾಪಂಚಿಕ ಸುಖ ಮನಸ್ಸಿನಂತೆ. ಮಕ್ಕಳ ಅಭಿವೃದ್ಧಿಯ ಸಂಗತಿಗಳು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ ಆದರೆ ಎರಡನೆಯವರ ಉತ್ಕರ್ಷದ ಬಗೆ ಬಹಳ ಮತ್ಸರ. ಅದರಂತೆ ಯಾರೋ ಒಬ್ಬರಿಗೆ ಮಹತ್ವದ ವಿಷಯದಲ್ಲಿ ವಿಪರೀತ ಸಲಹೆ ಕೊಟ್ಟ ಆರೋಪವೂ ಬರುವದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಯಶಸ್ಸು. ಮಿತ್ರ ಸುಖ ಅನುಕೂಲ. ಪ್ರವಾಸ ಮತ್ತು ಪತ್ರವ್ಯವಹಾರಕ್ಕಿಂತ ಭೆಟ್ಟಿ ಹೆಚ್ಚು ಅನುಕೂಲ. ಸ್ವಾತಿಗೆ ತೊಂದರೆ ಕಡಿಮೆ ತಾ. ೨೫–೨೬, ೨೭–೨೮ ಅನುಕೂಲ.

### ವೃಶ್ಚಿಕ

ಪ್ರಕೃತಿಗೆ ಹುಣ್ಣು ಇಲ್ಲವೆ ಹುರುಕಿನ ಉಪದ್ರವ. ಸ್ತ್ರೀಸುಖ ಉತ್ತಮ. ಮಕ್ಕಳ ಉನ್ನತಿ ಪ್ರಾಪಂಚಿಕ ಸುಖದಲ್ಲಿ ಪೂರ್ಣ ಸಮಾಧಾನ. ಉದ್ಯೋಗದಲ್ಲಿ ಒಳ್ಳೆ ಪ್ರಗತಿ ತುಂಬ ಲಾಭ. ಆದರೆ ಪ್ರತಿಷ್ಠೆಗೆ ಮಾತ್ರ ಕುಂದು ಬರುವ ಸಂಭವ. ಪರಸ್ತ್ರೀ ಅಭಿಲಾಷೆಯ ದುರ್ಬುದ್ಧಿ ಹೆಚ್ಚುವದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ವೆಚ್ಚ ಮತ್ತು ತೊಂದರೆ ಬಹಳ. ಆದರೆ ಅನುಕೂಲತೆಯು ತುಂಬ. ಸ್ಥಾವರದಲ್ಲಿ ಹೆಚ್ಚಳ ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ. ಅನುರಾಧೆಗೆ ತೊಂದರೆಯಿಂದ ಯಶಸ್ಸು. ತಾ. ೨೫–೨೬–೨೯–೩೦ ಅನುಕೂಲ.

### ಧನು

ಎಲ್ಲರ ಪ್ರಕೃತಿ ಉತ್ತಮ. ಆದರೆ ಮಕ್ಕಳಲ್ಲಿ ಒಬ್ಬರಿಗೆ ಒಂದು ಅಪಘಾತದ ಸಂಭವ. ಎಲ್ಲ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಉತ್ತಮ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮವೇ. ಆದರೆ ವೆಚ್ಚವೂ ಬಹಳ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ವೆಚ್ಚ ಬಹಳ. ಆದರೆ ಕೊನೆಗೆ ಅನುಕೂಲತೆ ಅವಚಿತ ಲಾಭದ ಸಂಭವ. ಪ್ರವಾಸಾದಿ ಕೆಲಸ ಸುಖವು. ಪೂರ್ವಾಷಾಢಕ್ಕೆ ತೊಂದರೆ ಕಡಿಮೆ ತಾ. ೨೭–೨೮ ೨೯–೩೦ ಅನುಕೂಲ.

### ಮಕರ

ನಿಮ್ಮ ಮತ್ತು ಮಕ್ಕಳ ಪ್ರಕೃತಿಗೆ ಬಹಳ ಕ್ಲೇಶ. ಆದರೆ ಹೆಂಡತಿಯದು ಅನುಕೂಲ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಸಾಮಾನ್ಯ. ಉದ್ಯೋಗದಲ್ಲಿ ಬಹಳ ಪ್ರಗತಿ ಉತ್ತಮ ಪ್ರತಿಷ್ಠೆ ಮತ್ತು ತುಂಬ ಲಾಭ. ಆದರೆ ಹೊಸ ಹೊಸ ವೆಚ್ಚಗಳಿಂದ ತೊಂದರೆಯಲ್ಲಿ ಬರುವ ಪ್ರಸಂಗ. ಧಂದೆಯುವರಿಗಿಂತ ನೋಕರದವರಿಗೆ ವೆಚ್ಚ ಕಡಮೆ. ಮಿತ್ರರು ಕೆಟ್ಟ ಮಾತಾಡುವದರಿಂದ ಮನಸ್ಸು ವಿಷಣ್ಣಗೊಳ್ಳುವದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲತೆ. ಆದರೆ ವೆಚ್ಚ ತೊಂದರೆಯದು ಮತ್ತು ಅನೇಕ ಜನರೆದುರಿಗೆ ತಲೆ ಕೆಳಗೆ ಹಾಕುವ ಪ್ರಸಂಗ. ಪ್ರವಾಸವೂ ಪತ್ರವ್ಯವಹಾರವೂ ಭೆಟ್ಟಿಗಿಂತ ಹೆಚ್ಚು ಅನುಕೂಲ. ಶ್ರವಣಾ ನಕ್ಷತ್ರಕ್ಕೆ ತೊಂದರೆ ಕಡಮೆ. ತಾ ೨೫ ೨೬–೩೦ ಈ ದಿನಗಳು ಒಳ್ಳೆಯವು.

### ಕುಂಭ

ನಿಮ್ಮ ಮತ್ತು ನಿಮ್ಮ ಹೆಂಡತಿಯ ಪ್ರಕೃತಿಯು ಉತ್ತಮ. ಆದರೆ ಮಕ್ಕಳಲ್ಲಿ ಒಬ್ಬರಿಗೆ ವಿಲಕ್ಷಣ ರೀತಿಯ ಕ್ಲೇಶ. ಇತರ ವಿಷಯಗಳಲ್ಲಿ ಪ್ರಾಪಂಚಿಕ ಸುಖವು ಉತ್ತಮವೇ. ಆದರೂ ಕೆಲವೊಂದು ಸಂಗತಿಗಳ ಬಗೆ ಉತ್ಸುಕತೆಯುಂಟಾಗಿ ಮನಸ್ಸು ವ್ಯಗ್ರವಾಗುವದು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಅತಿ ಉತ್ತಮ. ಅನಪೇಕ್ಷಿತ ಲಾಭ ಸಂಭವವೂ ಉಂಟು. ವಾದದಲ್ಲಿಯೂ ಸ್ಪರ್ಧೆಯಲ್ಲಿಯೂ ಅನುಕೂಲತೆ. ಆದರೆ ಶತ್ರುಗಳು ಒಂದು ಹೊಸ ಮೋಹಜಾಲವನ್ನು ಬೀಸುವ ಪ್ರಯತ್ನ ಮಾಡುವರು. ಮಿತ್ರಸುಖವೂ ನೆಟ್ಟಗೆ ಪತ್ರವ್ಯವಹಾರಕ್ಕಿಂತ ಭೆಟ್ಟಿಯೂ ಪ್ರವಾಸವೂ ಅನುಕೂಲದ್ದಾಗಿ ಪರಿಣಮಿಸುವವು. ಶತತಾರಿಕೆಗೆ ಹೆಚ್ಚು ಉತ್ತಮ. ತಾ. ೨೭–೨೮–೩೦ ಇವು ಒಳ್ಳೆಯವು.

### ಮೀನ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಉತ್ತಮ. ಕೆಲವು ಸಂಗತಿಗಳಲ್ಲಿ ಮನಸ್ಸಿನ ವಿರುದ್ಧ ವರ್ತಿಸಬೇಕಾದ ಪ್ರಸಂಗ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಉತ್ತಮವೇ. ಆದರೆ ಲಾಭ ಮಾತ್ರ ಆ ಮಾನದಿಂದ ಕಡಮೆಯೇ. ಮಿತ್ರತ್ವದಲ್ಲಿ ವಿರೋಧ ಕಂಡು ಬರುವದು. ದೈವೀ ಸಾಕ್ಷಾತ್ಕಾರದ ಕೆಲ ಚಮತ್ಕಾರಗಳು ಘಟಿಸುವವು. ವಾದದಲ್ಲಿಯೂ ಸ್ಪರ್ಧೆಯಲ್ಲಿಯೂ ಉತ್ತಮ ಯಶ. ಒಬ್ಬ ಸ್ತ್ರೀಯು ನಿಮ್ಮ ಬಗ್ಗೆ ತಪ್ಪು ಕಲ್ಪನೆ ಮಾಡಿಕೊಳ್ಳುವ ಸಂಭವ. ಪ್ರವಾಸಾದಿ ಕಾರ್ಯಗಳು ಹಿತಾವಹ. ಉತ್ತರಾಭಾದ್ರಪದೆಗೆ ತೊಂದರೆ ಕಡಮೆ. ತಾ. ೨೫, ೨೬, ೨೯, ೩೦ ಇವು ಒಳ್ಳೆಯ ದಿನಗಳು.

# ರೂಪರಂಗ

## ಎಲಾನ್



ಮುನ್ನಾವರ್ ಸುಲ್ತಾನಾ ಕಥಾನಾಯಿಕೆಯ ಪಾತ್ರದಲ್ಲಿ

ಇಬ್ಬರು ಅಕ್ಕತಂಗಿಯರು. ಅವರಲ್ಲಿ ಅಕ್ಕ ಬಡವೆ, ತಂಗಿ ಸಿರಿವಂತೆ, ಅಕ್ಕನಿಗೆ ಜವೇದ ಮತ್ತು ತಂಗಿಗೆ ಸಜ್ಜಾದ ಎಂಬ ಮಕ್ಕಳಿದ್ದರು. ಜವೇದನನ್ನು ಚೆನ್ನಾಗಿ ಸಾಕಿ ಅವನ ತಾಯಿ ಯೋಗ್ಯನನ್ನಾಗಿಯೂ ಸಜ್ಜಾದನನ್ನು ಅವನ ತಾಯಿ ಅತಿ ಮಮತೆಯಿಂದ ಸಾಕಿ ಅಯೋಗ್ಯನನ್ನಾಗಿಯೂ ಮಾಡುತ್ತಾರೆ. ಅಂಥ ವಾತ್ಸಲ್ಯದಿಂದ ಸಜ್ಜಾದನ ದೌರ್ಬಾತ್ಮ್ಯವನ್ನು ಅಟ್ಟಕ್ಕೇರಿಸಿದ ಅವನ ತಾಯಿ ಅವನೇ ಸ್ವತಃ ಮರಣ ಶಯ್ಯೆ ಹಿಡಿದ ನೀತಿವಂತ ತಂದೆಯನ್ನು ಕೆನ್ನೆಗೆ ಹೊಡೆದು ಬೇಗನೆ ಯಮಲೋಕಕ್ಕೆ ಅಟ್ಟಿದ್ದನ್ನು ಕಂಡರೂ ಕಣ್ಣು ತೆರೆಯಲಿಲ್ಲ!

ಪತಿಯ ಸದ್ವಾಕ್ಯಕ್ಕೆ ಕಿವಿಗೊಡದ ಪತಿದ್ರೋಹಿಯಾದ ಕುರುಡೆದೆಯ ತಾಯಿ ಸನಿಹದ ಸಾವಕಾರನೊಬ್ಬನ ಮಗಳಾದ ನಾಜ್ ಪರ್ವಾರ್ ಎಂಬ ಮುಗ್ಧೆ (Innocent, timid and stupid) ಯನ್ನು ಅವಳ ಒಲವು ಜವೇದನಲ್ಲಿ ಹರಿದದ್ದನ್ನು ತಿಳಿದು ಅವಳ ಇಷ್ಟಕ್ಕೆ ವಿರುದ್ಧವಾಗಿ ತನ್ನ ಗೊಂಬೆಮಗನಿಗೆ ಮದುವೆ ಮಾಡಿದ್ದಳು. ಇಂದಿನ ಸಾಮಾನ್ಯ ಸಾಮಾಜಿಕ ಚಿತ್ರಗಳಲ್ಲಿ ಎಲ್ಲೆಡೆ ತೋರುವಂತೆ ಈ ಗಂಡಸು ಭೂಪತಿ ತಾಯಿಯೆಂಬ ಹೆಣ್ಣಿನ ಅಂಧವಾತ್ಸಲ್ಯದ ಪ್ರೋತ್ಸಾಹದಿಂದ ಸೂಳೆಯೆಂಬ ಹೆಣ್ಣಿನ ಕಪಟ ಪ್ರೇಮಕ್ಕೆ ಬಲಿಯಾಗಿ ಹೆಂಡತಿಗೆ ದುಃಖಕಾರಕನೂ ದಿವಾಳಿಖೋರನೂ ಆಗಿ ಕಡೆಗೊಮ್ಮೆ ತಾಯಿಗೇ ಹೊಡೆದು ಹಣಕಿತ್ತುಕೊಂಡ. ಮತ್ತೊಮ್ಮೆ ಹೆಂಡತಿಗೆ ಅಪ್ಪ ಕೊಟ್ಟ ಹಣವನ್ನು ಕಸಿದುಕೊಂಡಮೇಲೆ ಅಪ್ಪನಿಂದ ಮತ್ತೆ ತರುವೆನೆಂದು ಅವಳನ್ನು ಪೀಡಿಸಿ ವ್ಯರ್ಥಪ್ರಯತ್ನನಾಗಿ, ಕೆಲ ಆಸ್ತಿಯನ್ನು ಅವಳಪ್ಪ ಆಗ ತಾನೆ ಹುಟ್ಟಿದ ಇವನ ಎಳೆ ಮಗನ ಹೆಸರಿಗೆ ಬರೆದಿಟ್ಟದ್ದನ್ನು ಕೇಳಿ ಕೆರಳಿದ ಸಿಂಹನಾಗಿ ಮಗುವನ್ನು ಕೊಲ್ಲಲು ಹೋದ. ಆಗ ಅವನ ತಾಯಿ ಸಲಾಕೆಯಿಂದ ಹೊಡೆದು ಮಗನನ್ನು ಕೊಂದಳು. ಹೆಂಡತಿ ಮಗು ಅಲ್ಲಿದ್ದುದನ್ನು ಕಂಡು ಅವಳೇ ಗಂಡನನ್ನು ಕೊಂದಳೆಂದು ಪೋಲೀಸರು ಅವಳನ್ನು ಕೋರ್ಟಿಗೊಯ್ದರು.

ಇತ್ತ ಜವೇದನು ನಾಜಪರ್ವಾರಳ ಪ್ರೇಮದಿಂದ ವಂಚಿತನಾಗಿ ನಿರಾಶಿಸಿದರೂ ಹೆಸರದೆ ಕಂಗೆಡದೆ ವಿಲಾಯತಿಗೆ ಹೋಗಿ ಕಾಯದೆ ಶಿಕ್ಷಣ ಪಡೆದು ಮರಳಿ ಬಂದು ವಕೀಲಿಯಲ್ಲಿ ಬಹಳ ಹೆಸರು ಪಡೆದನು. ನಾಜಪರ್ವಾರಳ ಅಪ್ಪ ತನ್ನ ಮಗಳನ್ನು ಸಂರಕ್ಷಿಸಲು ಇವನ ಮೊರೆಹೊಕ್ಕನು. ಇವನು ಬುದ್ಧಿಚಮತ್ಕಾರವನ್ನು ಪ್ರಯೋಗಿಸಿ ಅಂಧವಾತ್ಸಲ್ಯದಮಾತೆಯ ಮೇಲೆ [illegible]ರಿಣಾಮವಾಗುವಂತೆ ಮಗುವಿಗೆ ಹೆದರಿಸಿ ಸತ್ಯವನ್ನು ಅವಳ ಬಾಯಿಂದ ಬರಿಸಿದನು. ಅನಂತರ ನಿರಪರಾಧಿತ್ವವನ್ನು ಪಡೆದು ಹೊರಬಿದ್ದ ಮುಗ್ಧ ಕಥಾನಾಯಿಕೆ ಮಾತೃ ದೌರ್ಬಾತ್ಮ್ಯದಿಂದ ಮಕ್ಕಳು ದುರಾತ್ಮರಾಗುವರೆಂಬುವನ್ನು ತನ್ನ ಗಂಡನ ಜೀವನದಿಂದಲೂ ತನ್ನ ತಂದೆ ತನ್ನನ್ನು ಕೇವಲ ಮುಗ್ಧೆಯನ್ನಾಗಿ ಮಾಡಿ ಬೆಳೆಸಿದ್ದನ್ನು ತನ್ನ ಜೀವನದಿಂದಲೂ ಕಂಡುಕೊಂಡು ಇಂಥ ತಪ್ಪು ಹಿಂದುಸ್ತಾನದಲ್ಲಿ ಆಗದಂತೆ ಮಾಡಲು ತಾಯಿಯರು ಮುಂದೆಬರಬೇಕೆಂದು ಸಾರಿ, ತಾನೇ ಸ್ವತಃ ಒಂದು ಶಾಲೆಯನ್ನು ಧರ್ಮಾರ್ಥವಾಗಿ ತೆರೆದು ಉಪಾಧ್ಯಾಯತ್ವ ವಹಿಸಿ ಪಶ್ಚಾತ್ತಾಪ್ತಳೂ ದುಃಖದಿಂದ ಪವಿತ್ರತೆಯನ್ನೂ ಸುಜ್ಞಾನವನ್ನೂ ಪಡೆದವಳೂ ಆಗಿ ದೇಶಸೇವೆಯಿಂದ ತನ್ನ ಜೀವನವನ್ನು ಸಾರ್ಥಕ ಮಾಡಿಕೊಂಡಳು.

ಅಕ್ಕತಂಗಿಯರಲ್ಲಿ ಅಕ್ಕನು ನಾರಿ, ತಂಗಿ ಮಾರಿ. ನಾಯಕ ನಾಯಿಕೆಯರಲ್ಲಿ ನಾಯಕ ಉದ್ಧತ, ನಾಯಿಕೆ ಭೀರು; ಇಬ್ಬರೂ ಮೂಢರು, ಮಾತಾಪಿತೃಗಳಿಂದ ನ್ಯಾಯವಾದ ಶಿಕ್ಷಣ ಪಡೆಯದವರು. ಇದು ಇಂದಿನ ಸಾಮಾನ್ಯ ಹಿಂದೀ ಕುಟುಂಬಗಳ ಚಿತ್ರವನ್ನು ಕಣ್ಣೆದುರಿಗಿಟ್ಟು "ಮಾತೃದೇವೋಭವ" ಹೋಗಿ "ಮಾತೃಪಿಶಾಚೋಭವ" ಆಗಿರುವುದನ್ನು ಬೊಟ್ಟುಮಾಡಿ ತೋರಿಸುತ್ತದೆ; ಅಲ್ಲದೆ, ಪಶ್ಚಾತ್ತಪ್ತ ಕಥಾನಾಯಿಕೆಯ ಮೂಲಕ ಬಹು ಅಮೂಲ್ಯವಾದ ತಾಯ್ತನದ ಹೊಣೆಯೇನೆಂಬುದನ್ನು ವೀರ ಕರುಣ ವಾಣಿಯಿಂದ ಘಂಟಾ ಘೋಷವಾಗಿ ಸಾರುತ್ತದೆ. ಈ ಸಂದೇಶ ಜಗನ್ಮಾನ್ಯವಿದೆ, ಹಿಂದುಸ್ತಾನದ ತಾಯ್ತಂದೆಯರ ಕಣ್ಣಿಗಿದು ಒಂದು ಅಂಜನವಾಗಿದೆ.

('ಕರ್ಮವೀರ'ದ ಪ್ರತಿನಿಧಿಯಿಂದ)

# ಕರ್ನಾಟಕ

## ಧಾರವಾಡ

ಧಾರವಾಡ ಕರ್ನಾಟಕ ಎಜ್ಯುಕೇಶನ ಬೋರ್ಡಿನ ಜೆಲ್ಲಿಯು ಹಬ್ಬವನ್ನು ಬರುವ ಮಾರ್ಚ ೧೯೪೯ ರಲ್ಲಿ ನೆರವೇರಿಸಬೇಕೆಂದು ನಿರ್ಣಯಿಸಲಾಗಿದೆ. ಆ ಕಾಲಕ್ಕೆ ಈ ಬೋರ್ಡಿನ ಶಾಲೆ ಕಾಲೇಜುಗಳ ಹಳೆಯ ವಿದ್ಯಾರ್ಥಿಗಳ ಸ್ನೇಹ ಸಮ್ಮೇಲನವೂ ನಡೆಯುವದು. ಹಳೆಯ ವಿದ್ಯಾರ್ಥಿಗಳು ತಮ್ಮ ವಿಳಾಸವನ್ನು ಶ್ರೀ ಎಸ್. ಜಿ. ಶಿನೋಳಕರ ಪ್ರಿನ್ಸಿಪಾಲ ಕರ್ನಾಟಕ ಹಾಯಸ್ಕೂಲ ಕಿಲ್ಲೆ ಧಾರವಾಡ ಇವರಿಗೆ ತಿಳಿಸಬೇಕು.

ಅ. ಭಾ. ರಾಷ್ಟ್ರೀಯ ಮಜದೂರ ಕಾಂಗ್ರೆಸ್ಸಿನ ಹೊಸ ಘಟನೆಯಂತೆ ಕರ್ನಾಟಕ ಪ್ರತಿನಿಧಿಗಳ ಮೊದಲನೆಯ ಸಭೆ ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಕಚೇರಿಯಲ್ಲಿ ೧೭ ಕ್ಕೆ ಶ್ರೀ ದಿವಾಕರ ರಂಗರಾಯರ ಅಧ್ಯಕ್ಷತೆಯಲ್ಲಿ ಸೇರಿ ಕಾರ್ಯಕಾರಿ ಮಂಡಳವನ್ನಾರಿಸಿತು. ಶ್ರೀ ದಿವಾಕರ ರಂಗರಾಯರು ಅಧ್ಯಕ್ಷರು, ಶಂಭೂರಾವ ಜೋಶಿ ಕೋಶಾಧ್ಯಕ್ಷರು ಕಾಯದೆ ಸಲಹೆಗಾರರು, ಶಿವಶಂಕರಪ್ಪ ದೇವಪುರ ಇವರು ಕಾರ್ಯದರ್ಶಿಗಳಾಗಿ ಆರಿಸಲ್ಪಟ್ಟರು. ಘಟನೆಯನ್ನು ಸಿದ್ಧಪಡಿಸಲು ಉಪಸಮಿತಿ ನೇಮಕವಾಯಿತು.

ಆರೇಕೊಪ್ಪದಲ್ಲಿ ಕಳೆದ ೨೫ ಕ್ಕೆ ಶ್ರೀ. ಮಲ್ಲಪ್ಪಣ್ಣ ಅಕ್ಕಿ ಇವರ ಅಧ್ಯಕ್ಷತೆಯಲ್ಲಿ ಮುಂಬಯಿ ಕನ್ನಡ ಮಲೆನಾಡು ಭಾಗದ ಮರಾಠಾ ಜನರ ಸಭೆ ಸೇರಿದ್ದಿತು. ಶ್ರೀ. ಕೊಟ್ಟೂರೇಶ್ವರ ಶಾಸ್ತ್ರಿಗಳು ಮರಾಠರು ಎಂದಿನಿಂದ ರಾಷ್ಟ್ರಕ್ಕೆ ಸಲ್ಲಿಸುತ್ತ ಬಂದ ಸೇವೆಯನ್ನು ವಿವರಿಸಿ ಸಭೆಯ ಪ್ರಾರಂಭೋತ್ಸವ ನಡೆಸಿದರು. ಹೈದರಾಬಾದ ವಿಜಯದ ಬಗ್ಗೆ ಭಾರತ ಸರಕಾರವನ್ನಭಿನಂದಿಸಲಾಯಿತು. ಶ್ರೀ. ಪವಾರ ಮಾಸ್ತರರ ಭಾಷಣವಾದ ಮೇಲೆ ೬ ಜನರ ಕ್ರಿಯಾ ಸಮಿತಿಯೊಂದು ಆರಿಸಲ್ಪಟ್ಟಿತು. ಕಾಣಿಕೆರೂಪವಾಗಿ ಹಣ ಕೂಡಿತು. ವಿಧಾಯಕ ಕಾರ್ಯ ಮಾಡಬೇಕೆಂದೂ ಗೊತ್ತಾಯಿತು.

ಕಳೆದ ೨೪ ನೇ ತಾರೀಕು ಹುಬ್ಬಳ್ಳಿಯಲ್ಲಿ ಸೋಮಾಬಾಯಿ ಜೀವರಾಜ ಎಂಬ ಗುಜ್ಜರ ಹೆಣ್ಣುಮಗಳು ಬೆಂಗಳೂರಿನಿಂದ ರೇಲ್ವೆ ಪ್ರಯಾಣಮಾಡುತಿದ್ದಾಗ ಕಳ್ಳರು ಅವರ ೫೦೦೦ ರೂ. ಬೆಲೆ ಬಾಳುವ ಬಂಗಾರದ ಆಭರಣಗಳನ್ನು ಅಪಹರಿಸಿದ್ದರಷ್ಟೆ. ಹುಬ್ಬಳ್ಳಿ ನಗರ ಪೋಲೀಸರು ಈಗ ಮೂವರು ಹೆಣ್ಣುಮಕ್ಕಳನ್ನು ಆ ಸಂಬಂಧದಲ್ಲಿ ಬಂಧಿಸಿದ್ದಾರೆ. ಅವರಲ್ಲಿ ೧೦೦೦ ರೂಪಾಯಿಗಳ ಮಾಲು ಸಿಕ್ಕಿದ್ದು ಅದನ್ನು ಜಪ್ತ ಮಾಡಲಾಗಿದೆ.

ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದ ಸಭೆ ಸೇರಿ ಬರುವ ವರ್ಷಕ್ಕೆ ಶ್ರೀ ಗಿರಿಮಲ್ಲಪ್ಪ ನಲವಡಿಯವರು ಅಧ್ಯಕ್ಷರು, ಎನ್. ಕೆ. ದೀಕ್ಷಿತ, ರಾ. ಶ್ರೀ. ಹುಕ್ಕೇರಿಕರ, ಆರ್. ಎ. ಜಾಗಿರದಾರ, ಮಾಸ್ತಿ ವೆಂಕಟೇಶ ಅಯ್ಯಂಗಾರ, ಡಾ. ಎಸ್. ಸಿ. ನಂದೀಮಠ ಇವರು ಉಪಾಧ್ಯಕ್ಷರು, ಪ್ರೊ. ಆರ್. ವಿ. ಜಾಗಿರದಾರರು ಕಾರ್ಯದರ್ಶಿ, ಪ್ರೊ. ಎಸ್. ಆರ್. ಮಳಗಿ ಜತೆ ಕಾರ್ಯದರ್ಶಿ. ಡಾ. ಕಾಂತರಾವ ಕಮಲಾಪುರ ಇವರು ಕಾರ್ಯಕಾರೀ ಮಂಡಳದ ಅಧ್ಯಕ್ಷರು ಮತ್ತು ಪ್ರೊ. ಶಿ. ಶಿ. ಬಸವನಾಳರು ಕೋಶಾಧ್ಯಕ್ಷರಾಗಿ ಆರಿಸಲ್ಪಟ್ಟರು.

ಕರ್ನಾಟಕ ಗ್ರಂಥಾಲಯದ ಆಡಳಿತದ ಸಂಬಂಧದಲ್ಲಿ ನಿಯಮಗಳು ಸಿದ್ಧಪಡಿಸಲ್ಪಟ್ಟವು. ಸಂಘದ, ಅಧ್ಯಕ್ಷ ಕಾರ್ಯಾಧ್ಯಕ್ಷ ಪ್ರಧಾನ ಕಾರ್ಯದರ್ಶಿ ಮತ್ತು ಕಾರ್ಯಕಾರೀ ಮಂಡಳದ ಇಬ್ಬರು ಪ್ರತಿನಿಧಿಗಳು ಮತ್ತು ಮುಂಬಯಿ ಪ್ರಾಂತದ ಲೈಬರಿಯ ಕ್ಯುರೇಟರರು ಅಲ್ಲದೆ ೧೦೦೦, ೭೦೦, ೫೦೦, ೬೫೦, ರೂ. ಪ್ರತಿವರ್ಷ ಗ್ರಂಥಾಲಯಕ್ಕೆ ಕೊಡುವ ವ್ಯಕ್ತಿ ಇಲ್ಲವೆ ಸಂಘಗಳ ಒಬ್ಬ ಪ್ರತಿನಿಧಿ ಅಲ್ಲದೆ ೩೦೦೦ ಕ್ಕಿಂತ ಹೆಚ್ಚು ವಾರ್ಷಿಕ ವೆಚ್ಚವಿದ್ದ ಕರ್ನಾಟಕದ ಯಾವದೆ ವಾಚನಾಲಯದ ಪ್ರತಿನಿಧಿ ಇವರು ಆಡಳಿತೆ ಮಂಡಳದಲ್ಲಿರುವರು.

ಯರಿಕೊಪ್ಪ ದರೋಡೆಯಲ್ಲಿಯ ೪೭೦೦ ರೂಪಾಯಿಗಳ ಬಂಗಾರ ಆಭರಣಗಳು ಧಾರವಾಡ ಹೆಡ್‌ಕ್ವಾರ್ಟರ್ಸದಲ್ಲಿಯ ಹೆಡ್‌ಕಾನ್‌ಸ್ಟೇಬಲ್ ಗಿರಿಮಲ್ಲಪ್ಪನಲ್ಲಿ ದೊರೆತದ್ದರಿಂದ ಅವರನ್ನು ಬಂಧಿಸಲಾಗಿದೆ. ಈ ಮೊದಲು ಈ ಪ್ರಕರಣದಲ್ಲಿ ೫ ಜನ ಆರೋಪಿಗಳನ್ನು ಬಂಧಿಸಲಾಗಿದೆ. ಅಡಿವೆಪ್ಪಮರಿ ಎಂಬ ಆಪಾದಿತನು ಹೆಡ್‌ಕ್ವಾರ್ಟರಿನ ಬೈಲಿನಲ್ಲಿ ಬಚ್ಚಿಟ್ಟ ಒಂದು ದೇಶೀ ರಿವಾಲ್ವರು ದೊರೆತಿದ್ದು ಪೋಲೀಸರು ಅದನ್ನು ವಶಪಡಿಸಿಕೊಂಡಿದ್ದಾರೆ.

## ಉತ್ತರ ಕನ್ನಡ

ಬೀಳಗಿಯಲ್ಲಿ ಗಾಂಧೀ ಜಯಂತ್ಯುತ್ಸವ ಮತ್ತು ವಿಜಯ ದಶಮೀ ಮಹೋತ್ಸವ ಅತ್ಯಂತ ವಿಜೃಂಭಣೆಯಿಂದ ನಡೆದವು. ಶ್ರೀ ಹರಿ ರಾಮಕೃಷ್ಣ ರಾಜವೈದ್ಯ ಇವರು ಮುಂದಾಗಿ ಈ ಕೆಲಸವನ್ನು ಮಾಡಿದರು.

ಬಣಕೈಯನ (ಸಿರ್ಸಿ) ನವರಾತ್ರಿಯ ಉತ್ಸವ ವಿಧ್ಯುಕ್ತವಾಗಿ ಜರುಗಿತು. ಅದೇ ರೀತಿ ಶೀಗೇಹಳ್ಳಿ ಪರಮಾನಂದಮಠದಲ್ಲಿ ಬ್ರಹ್ಮಶ್ರೀ ಶಿವಾನಂದ ಸರಸ್ವತಿ ಸ್ವಾಮಿ ಚರಣರ ಸಂವಿಧಾನದಲ್ಲಿ ಮಾನವಮಿ ಉತ್ಸವ ಜರುಗಿತು.

ದೊಡ್ಮನೆ ಗ್ರಾಮದ ಕಾಂಗ್ರೆಸ ಗ್ರುಪದವರು ನಾಡಹಬ್ಬವನ್ನು ಜರುಗಿಸಿದರು. ಧ್ವಜವಂದನೆ ಶ್ರೀ ತಮ್ಮಣ್ಣ ವಿಘ್ನೇಶ್ವರ ಭಟ್ಟರ ಹಿರಿತನದಲ್ಲಿ ಸಭೆ ಸೇರಿ ಅನೇಕ ಮಹನೀಯರ ಭಾಷಣಗಳಾದವು. ಬಹುಮಾನ ವಿತರಣವೂ ಆಯಿತು.

## ವಿಜಾಪುರ

ವಿಜಾಪುರ ಜಿಲ್ಹೆಯಲ್ಲಿ ಸಪ್ಟೆಂಬರ ಕೊನೆವರೆಗೆ ಮಹಾತ್ಮಾ ಗಾಂಧಿ ರಾಷ್ಟ್ರೀಯ ಸ್ಮಾರಕ ನಿಧಿ ೧೭೫೩೩ ರೂಪಾಯಿ ಕೂಡಿದೆ.

ಸಿಂದಗಿ ತಾಲೂಕಿನ ಸಮೀಪದ ಹಳ್ಳಿಯವರು ಆಲಾಳ ತಾಲೂಕಿನ ಸಮೀಪದ ಹಳ್ಳಿಯ ಜನರು ಆಲಾಳದಲ್ಲಿ ಸಭೆ ಸೇರಿ ಹೈದರಾಬಾದ ವಿಜಯೋತ್ಸವವನ್ನು ಆಚರಿಸಿದರು. ಶ್ರೀ ಭೀಮನಗೌಡರ ಹಸ್ತದಿಂದ ತ್ರಿವರ್ಣ ಧ್ವಜವನ್ನೂ ಏರಿಸಲಾಯಿತು. ದೀಪೋತ್ಸವ ಅನ್ನ ಸಂತರ್ಪಣೆ ನಡೆದವು. ಅದೇ ರೀತಿ ತಳಹಳ್ಳಿಯಲ್ಲಿಯೂ ಈ ವಿಜಯೋತ್ಸವವನ್ನಾಚರಿಸಲಾಯಿತು. ಬಮ್ಮನಹಳ್ಳಿಯಲ್ಲಿಯೂ ವಿಜಯೋತ್ಸವ ಜರುಗಿತು.

ವಿಜಾಪುರ ಪಿ ಡಿ ಜೆ ಹಾಯಸ್ಕೂಲಿನ ಸ್ನೇಹ ಸಮ್ಮೇಲನವು ಶ್ರೀ. ದ. ಪ ಕರಮರಕರರ ಹಿರಿತನದಲ್ಲಿ ಕಳೆದವಾರ ಸಂಭ್ರಮದಿಂದ ಜರುಗಿತು,

## ಕನ್ನಡ ಸಂಸ್ಥಾನ

ಆಹಾರ ವಿಷಯದ ಧೋರಣವನ್ನು ನಿರ್ಧರಿಸಲು ಮೈಸೂರು ಪ್ರಜಾ ಪ್ರತಿನಿಧಿ ಸಭೆಯ ಕಾಂಗ್ರೆಸ ಪಕ್ಷದ ಸಭೆಯಲ್ಲಿ ವಿಚಾರವಾಗಿ ೧೪ ಜನರ ಸಮಿತಿಯೊಂದನ್ನು ನೇಮಿಸಬೇಕೆಂದು ಗೊತ್ತಾಗಿದೆಯೆಂದು ತಿಳಿಯುತ್ತದೆ. ಈ ಉಪಸಮಿತಿಯವರು ಆಹಾರ ನಿಯಂತ್ರಣವನ್ನು ಮತ್ತೆ ಹೇರಬೇಕೋ ಹೇರಬಾರದೋ' ಎಂಬುದನ್ನು ಸರಕಾರಕ್ಕೆ ತಿಳಿಸುವರಂತೆ.

ಕಡ್ಲಿ ಮತ್ತು ತಜ್ಜನ್ಯ ಪದಾರ್ಥಗಳನ್ನು ಆಹಾರ ಪೂರೈಕೆಯ ಡಾಯರೆಕ್ಟರರ ಅಪ್ಪಣೆ ಪಡೆಯದೆ ಸಂಸ್ಥಾನದ ಹೊರಗೆ ಕಳಿಸಬಾರದೆಂದು ಮೈಸೂರು ಸರಕಾರದವರು ಆಜ್ಞೆಯೊಂದನ್ನು ಹೊರಡಿಸಿದ್ದಾರೆ. ಹಿಂದುಸ್ತಾನ ಸರಕಾರದವರು ಕಡ್ಲೆ ಮತ್ತು ತಜ್ಜನ್ಯ ಪದಾರ್ಥಗಳ ಬಗ್ಗೆ ವಹಿಸಿದ ಧೋರಣಗನುಸಾರವಾಗಿದೆ ಈ ಹೊಸ ಹುಕುಮು-

ಹರಿಹರದ ನಿವಾಸಿಯೊಬ್ಬನು ಸುಳ್ಳು ಹೇಳಿ ನಾಲ್ಕು ಸೀದಾ ಕಾರ್ಡುಗಳನ್ನು ದೊರಕಿಸಿಕೊಂಡು ನಗರದಲ್ಲಿಯ ಬೇರೆ ಬೇರೆ ಡಿಪೋಗಳಿಂದ ೩೦೦೦ ರೂ, ಸೀದಾ ತೆಗೆದುಕೊಂಡು (ಜನವರಿ ೧೯೪೫ ರಿಂದ ಮೇ ೧೯೪೭ರ ವರೆಗೆ) ದುರುಪಯೋಗ ಮಾಡಿದನೆಂದು ಖಟ್ಲೆಗೆ ಗುರಿಯಾಗಿದ್ದನು. ಅವನಿಗೀಗ ೬೦೦ ರೂಪಾಯಿ ದಂಡ ವಿಧಿಸಲಾಯಿತು.

## ಬಳ್ಳಾರಿ

ಮಂತ್ರಾಲಯದಲ್ಲಿಯ ಶ್ರೀ ಗುರು ಸಾರ್ವಭೌಮ ಸಂಸ್ಕೃತ ಕಾಲೇಜಿನ ದ್ವಿತೀಯ ವಾರ್ಷಿಕೋತ್ಸವವು ಶ್ರೀ ರಾಯರ ಮಠದ ಸದ್ಯದ ಶ್ರೀಪಾದಂಗಳವರಾದ ಶ್ರೀ ಸುಯಮೀಂದ್ರ ಸ್ವಾಮಿಗಳವರ ನೇತೃತ್ವದಲ್ಲಿ ಅಶ್ವೀನ ಶುದ್ಧ ನವಮಿ ದಶಮಿ ದ್ವಾದಶಿ ಈ ಮೂರು ದಿನ ನಡೆಯಿತು- ವಿದ್ಯಾರ್ಥಿಗಳು ವೇಣೀಸಂಹಾರವೆಂಬ ಸಂಸ್ಕೃತ ನಾಟಕವನ್ನಭಿನಯಿಸಿದರು. ಉತ್ಸವಕ್ಕಾಗಿ ಬಂದಿದ್ದ ಶ್ರೀ ರಾ ಸ್ವಾ. ಪಂಚಮುಖಿಯವರು ದ್ವಾದಶಿಯ ದಿನ ಸಂಸ್ಕೃತ ಸಾಹಿತ್ಯದ ಮಹತಿಯನ್ನು ಕುರಿತು ಭಾಷಣ ಮಾಡಿದರು. ಅನಂತರ ಶ್ರೀಪಾದಂಗಳವರು ಧರ್ಮೋಪದೇಶ ಮಾಡಿದರು. ಮಂಗಳಾರತಿಯೊಡನೆ ಉತ್ಸವ ಕೊನೆಗಂಡಿತು.

## ದಕ್ಷಿಣ ಕನ್ನಡ

ಆರ್. ಎಸ್. ಎಸ್. ಚಳವಳವನ್ನು ಪುನಃ ಆರಂಭ ಮಾಡುವುದರಲ್ಲಿದ್ದಾರೆಂದು ಮಂಗಳೂರಲ್ಲಿ ಎಂ. ಅನಂತ ಪೈ, ಯು. ಗೋಪಾಲ ಶೆಣೈ, ಪಟೇಲ್ ವಿಠಲ್ ಪೈ, ಪಿ. ನರಸಿಂಹ ಮಲ್ಯ—ಇವರನ್ನು ದಿನಾಂಕ ೧೦ ರಂದು ದಸ್ತಗಿರಿ ಮಾಡಿ ಮರುದಿನವೇ ಕಣ್ಣಾನೂರಿಗೊಯ್ಯಲಾಯಿತು.

ಮಂಗಳೂರಿನ ಭಾರತ ವಾಚನಾಲಯ ಮತ್ತು ಕೆಲವು ವ್ಯಾಯಾಮ ಮಂದಿರಗಳನ್ನು ಪೋಲೀಸರು ಜಪ್ತಿ ಮಾಡಿ ಕೆಲವು ಪತ್ರಿಕೆಗಳನ್ನು ಸ್ವಾಧೀನ ಪಡಿಸಿದ್ದಾರೆ.

ಮಂಗಳೂರಿಗೆ ಬಂದಿದ್ದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರನ್ನು ಕರ್ನಾಟಕ ಏಕೀಕರಣ ಸಂಘದವರು ದಿನಾಂಕ ೧೫ ರಂದು ಸತ್ಕರಿಸಿದರು. ಆಗ ಟಿ. ಟಿ. ಶರ್ಮರವರು ಮೈಸೂರಿನ ಜನತೆಯು ಕರ್ನಾಟಕ ಒಂದಾಗಬೇಕೆಂದು ಕಾತರಿಸುತ್ತಿದೆಯೆಂದೂ ಈಗ ಅಧಿಕಾರದಲ್ಲಿರುವವರು ಈ ಭಾಗದಲ್ಲಿ ಆಸಕ್ತಿಯನ್ನು ತೋರಿಸಿದರೆ ಮೈಸೂರು ಜನತೆಯು ಇದಕ್ಕೆ ವಿರೋಧವಿದೆಯೆಂದು ಭಾವಿಸಬಾರದೆಂದರು. ಸಭೆಗೆ ಮಂಗಳೂರಿನ ಸಾಹಿತಿಗಳೂ ಕರ್ನಾಟಕ ಏಕೀಕರಣ ಸಂಘದವರೂ ಇತರರೂ ಬಂದಿದ್ದರು.

ಮಂಗಳೂರಿಗೆ ಬಂದಿದ್ದ ಶ್ರೀ ಟಿ. ಟಿ. ಶರ್ಮರವರು, ಬಿ. ಎಸ್. ರಾಮಾಚಾರ್ಯ ಮತ್ತು ಬಿ. ಎಂ. ಮುತ್ತಣ್ಣ ಇವರು ಬೆಸೆಂಟ್ ರಾಷ್ಟ್ರೀಯ ಬಾಲಿಕಾ ಪಾಠ ಶಾಲೆಗೆ ದರ್ಶನವಿತ್ತು ವಿದ್ಯಾರ್ಥಿಗಳ ಸಭೆಯಲ್ಲಿ ಭಾಗವಹಿಸಿದರು. ಶ್ರೀ ಪಿ. ಕೆ. ನಾರಾಯಣ ಅವರು ಅತಿಥಿಗಳ ಪರಿಚಯ ಮಾಡಿದ ಮೇಲೆ ಮುತ್ತಣ್ಣನವರು 'ಭಾರತೀಯ ಮಹಿಳೆಯರ' ಆದರ್ಶವೆಂಬುದನ್ನು ಕುರಿತು ಮಾತನಾಡಿದರು. ರಾಮಾಚಾರ್ಯರು ಕೆಲಕವನಗಳನ್ನು ಹಾಡಿದರು. ಅಧ್ಯಕ್ಷರಾದ ಶರ್ಮರು ವೇದಕಾಲದಿಂದ ಇಂದಿನ ವರೆಗೆ ಬೆಳೆದು ಬಂದ ಮಹಾ ಪರಂಪರೆಯನ್ನು ಬೆಳೆಸುವ ಭಾಗ್ಯ ನಿಮ್ಮದಾಗಲೆಂದು ಹರಸಿದರು.

ಮಂಗಳೂರಿಗೆ ಬಂದಿದ್ದ ಮದ್ರಾಸು ಸರಕಾರದ ಆರೋಗ್ಯ ಮಂತ್ರಿ ಮಾನ್ಯ ಎ. ಬಿ. ಶೆಟ್ಟಿಯವರು ದಿನಾಂಕ ೧೧ ರಂದು ಇಲ್ಲಿನ ಸರಕಾರಿ ಕಾಲೇಜಿನಲ್ಲಿ ಗಾಂಧೀಜಿಯ ಭಾವಚಿತ್ರದ ಅನಾವರಣ ಮಾಡಿದರು. ದಿನಾಂಕ ೧೨ ರಂದು ಮಾನ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ಎಲೋಸಿಯಸ್ ಕಾಲೇಜಿನ ವರ್ಧಂತಿಯು ಜರುಗಿತು. ಮಂಗಳೂರಿನ ಸಮೀಪದ ಪದವು ಎಂಬಲ್ಲಿರಚಿಸಲಿರುವ ಉಪನಗರ ರಚನಾ ಉದ್ಘಾಟನಾ ಕಾರ್ಯವನ್ನು ದಿನಾಂಕ ೧೨ ರಂದು ಶ್ರೀ. ಎ. ಬಿ. ಶೆಟ್ಟಿಯವರು ಸಂಘದ ಕಚೇರಿಯ ಅಟ್ಟದಲ್ಲಿ ನೆರವೇರಿಸಿದರು.ಆಗ ಸಿ. ಜಿ. ಕಾರ್ಲಸನ್ ರವರು ಮಂತ್ರಿಗಳನ್ನು ಸ್ವಾಗತಿಸುತ್ತ ಯೋಜನೆಯನ್ನು ವಿವರಿಸಿದರು. ಶ್ರೀ. ವಿ. ಎಸ್. ಕುಡ್ವರು ವಂದನೆಯನ್ನರ್ಪಿಸಿದರು.

ಹಲವು ರೀತಿಯ ಸೋಡ್ತಿ ತಿಕೀಟುಗಳನ್ನು ಮಾರಾಟ ಮಾಡಿ ಜನತೆಯನ್ನು ಮೋಸಪಡಿಸಿದರೆಂಬ ಆರೋಪದ ಮೇಲೆ ೧೮ ಜನಗಳ ಮೇಲೆ ನಡೆದ ಮೊಕದ್ದಮೆಯು ಈಗ್ಗೆ ೧೦ ವರ್ಷದಿಂದ ಕಳ್ಳ ನಡೆದ ೧೫ ಮೊಕದ್ದಮೆಗಳ ತೀರ್ಪು ಹೊರಬಿದ್ದಿದೆ. ಹಲವರಿಗೆ ೩ ವರ್ಷ ಶಿಕ್ಷೆ, ೧೫೦೦ ಜುಲ್ಮಾನೆ ಮುಂತಾಗಿ ಹಲವು ರೀತಿಯ ಶಿಕ್ಷೆ-ದಂಡನೆಗಳಾಗಿವೆ.

ಮೂಡಬಿದ್ರೆಯ ಶ್ರೀ. ಸರಸ್ವತಿ ಸೇವಾ ಸಂಘದ ಆಶ್ರಯದಲ್ಲಿ ದಸರಾ ನಾಡಹಬ್ಬವು ದಿನಾಂಕ ೩ ರಿಂದ ೧೩ ವರೆಗೆ ಭಾಷಣ, ವಿನೋದಗಳಿಂದ ಜರುಗಿತು. ದಿನಾಂಕ ೧೩ ರಂದು ಉಪಸಂಹಾರ, ಸಭೆಯು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಶ್ರೀ. ಟಿ. ಟಿ. ಶರ್ಮರ ಅಧ್ಯಕ್ಷತೆಯಲ್ಲಿ ಜರಗಿತು.

ಕುಂದಾಪುರ ಕರ್ನಾಟಕ ಸಂಘದ ಆಶ್ರಯದಲ್ಲಿ ನಾಡಹಬ್ಬವು ದಿನಾಂಕ ೮, ೯, ೧೦ ರಂದು ಜರಗಿತು. ಮೊದಲ ದಿನದ ಕಾರ್ಯಕ್ರಮವು ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಟಿ. ಟಿ ಶರ್ಮರ ಅಧ್ಯಕ್ಷತೆಯಲ್ಲಿ ಜರುಗಿತು. ಮರುದಿನ ಶ್ರೀ. ಶರ್ಮರೊಂದಿಗೆ ಸತ್ಕಾರ ಕೂಟವೂ ಜರುಗಿತು.

## ಬೆಳಗಾವಿ

ವಿದ್ಯಾಪೀಠದ ಪ್ರಕರಣದಲ್ಲಿ ಶಿಕ್ಷೆಯಾಗಿದ್ದವರೆಂದು ಶ್ರೀ. ಬೆಣ್ಣುಟಗಿ ಕುಲಕರ್ಣಿ ಮತ್ತು ಕೃಷ್ಣಾಜಿ ಕುಲಕರ್ಣಿ ಇವರ ಮೇಲೆ ಖಟ್ಲೆ ಹಾಕಲಾಗಿದ್ದಿತಷ್ಟೆ. ಇವರ ಅಪೀಲು ಮುಂಬಯಿ ಹಾಯಕೋರ್ಟಿನ ನ್ಯಾಯಮೂರ್ತಿ ವಾಡಿಯೇಕರ ಮತ್ತು ಜಾಗಿರದಾರ ಇವರ ಮುಂದೆ ಬರಲು ಇಬ್ಬರೂ ನಿರಪರಾಧಿಗಳೆಂದು ತೀರ್ಪಿತ್ತರು.

## ಶ್ರೀ ಪಾದಿಗ ಕೃಷ್ಣಮೂರ್ತಿಯವರು

ಮಿಚಿಗನ್ ವಿಶ್ವವಿದ್ಯಾಲಯದಲ್ಲಿ ವೃತ್ತಪತ್ರಿಕಾ ಶಿಕ್ಷಣವನ್ನು ಪಡೆದು ಪದವಿಯನ್ನು ಸಂಪಾದಿಸಿ ಇಂಗ್ಲಂಡ ಇಟಲಿ ಸ್ವಿಟ್ಝರ್ಲಂಡ ಮೊದಲಾದ ದೇಶಗಳನ್ನು ಸಂಚರಿಸಿ ಶ್ರೀ ಪಾದಿಗ ಕೃಷ್ಣಮೂರ್ತಿಯವರು ಕಳೆದ ವಾರ ಹಿಂದುಸ್ತಾನಕ್ಕೆ ಮರಳಿದರು. ಅವರು ೧೯ ನೇ ತಾರೀಕು ಮೇಲಿನಿಂದ ಹುಬ್ಬಳ್ಳಿಗೆ ಬಂದರು. ಸಂಯುಕ್ತ ಕರ್ನಾಟಕ ಕಚೇರಿಯಲ್ಲಿ ಅವರಿಗೆ ಅಲ್ಪೋಪಹಾರವನ್ನು ಅಂದು ಸಾಯಂಕಾಲ ಕೊಡಲಾಯಿತು. ಆಗ ಹಲವು ಸ್ನೇಹಿತರು ಪತ್ರಿಕೋದ್ಯಮಿಗಳೂ ಬಂದಿದ್ದರು. ಶ್ರೀ ಪಾಟೀಲರು ಅತಿಥಿಗಳ ಪರಿಚಯ ಮಾಡಿಕೊಟ್ಟರು. ಅವರು ವಿದೇಶದಲ್ಲಿ ಸಾಧಿಸಿದ ಶ್ರೇಯಸ್ಸು ಮೊದಲಾದ್ದನ್ನು ತಿಳಿಸಿದ ನಂತರ ಶ್ರೀ ಪಾದಿಗರು ಒಂದು ಗಂಟೆ ಕಾಲ ತಮ್ಮ 'ಪರದೇಶವಾಸ ಮತ್ತು ಅಲ್ಲಿನ ಪತ್ರಿಕೋದ್ಯಮ ಮೊದಲಾದ ವಿಷಯವನ್ನು ಸ್ವಾರಸ್ಯವಾಗಿ ನಿರೂಪಿಸಿದರು. ಅಲ್ಪೋಪಹಾರ ಆಭಾರಮನ್ನಣೆಯೊಂದಿಗೆ ಕಾರ್ಯಕ್ರಮ ಕೊನೆಗಂಡಿತು.

## ಮಾತಿನ ಶಕ್ತಿ

(೧೧ ನೆಯ ಪುಟದಿಂದ)

ಬಲವಾಗಿರುವವರೆಗೆ ಆ ವೇಷಕ್ಕೆ ಬಲಿ ಬಿದ್ದು ಆತಿಮಾನವ ಇಲ್ಲವೆ ಅವಮಾನವ ಪಡೆತೆಗೊಳಿದರೆ ಜೀವನ ನಮಗೆ ಇದ್ದರೂ ಇಲ್ಲದಂತೆಯೋ ಆಗಲಿಲ್ಲವೇ? ಜೀವನದ ಮಾಧುರ್ಯದಿಂದ ನಾವು ವಂಚಿತರಾದಂತಾಗಲಿಲ್ಲವೆ?

ಸೌಂದರ್ಯ ನಿಜವಾಗಿರುವುದು ಸುಂದರ ವಸ್ತುವೆಂದು ಒಂದನ್ನು ಗಣಿಸುವ ಕಣ್ಣಿನಲ್ಲಲ್ಲದೆ ಅವಸ್ತುವಿನಲ್ಲಲ್ಲ ಎಂಬ ಪ್ರಸಿದ್ಧ ವಿಮರ್ಶಕನ ಮಾತು ಅಕ್ಷರಶಃ ನಿಜವಿರುವುದು (ಸೌಂದರ್ಯವೆಂದರೆ ಕೇವಲ ಅಭಿರುಚಿಯ ದೃಷ್ಟಿಯನ್ನವಲಂಬಿಸಿ ದೇಶಕಾಲ ಸಂಸ್ಕಾರಗಳಿಗೆ ತಕ್ಕಂತೆ ಭಿನ್ನಭಿನ್ನವಿರುವುದರಿಂದ) ಸ್ವತಃ ಸಿದ್ಧವಾದುದು. ಈ ದೃಷ್ಟಿಯಿಂದ ನೋಡಿದರೆ ಗಂಡಸರ ಸೌಂದರ್ಯ ಹೆಂಗಸರಿಗಿಲ್ಲ! ಈ ಮಾತಿನಿಂದ ನಮ್ಮ ಅಕ್ಕತಂಗಿಯರು ಗಾಬರಿಯಾಗಬೇಕಿಲ್ಲ. 'ಸೌಂದರ್ಯವೆಂಬುದು ಕಣ್ಣಿನ ಹುತ್ತಲ್ಲ' ಎಂದ ವರಕವಿಯ ಮಾತಿನಂತೆ ಆಶಾಶ್ವತ ಸೌಂದರ್ಯ ಅಭಾಸಿಕವಾದುದು; ಶಾಶ್ವತವೆನಿಸುವ ಸೌಂದರ್ಯವೇ ನಿಜವಾದ ಸೌಂದರ್ಯ ಎಂಬುದು ನಿಜವಲ್ಲವೆ? ವಿಚಾರ ಮಾಡಿ ನೋಡಿರಿ. ಈ ಶಾಶ್ವತ ಸೌಂದರ್ಯ ಪ್ರೇಮಜ್ಞಾನಗಳ ಪರಿಪೂರ್ಣತೆಯಿಂದಲ್ಲದೆ, ಮತ್ತಾವುದರಿಂದಲೂ ಮುಖದಲ್ಲಿ, ಕಣ್ಣಿನಲ್ಲಿ ಮೂಡದು! ಇಂಥ ಪ್ರೇಮಜ್ಞಾನಗಳನ್ನು ಸಾಕ್ಷಾತ್ಕರಿಸಿಕೊಡುವ ಮಾತಿನ ವಿದ್ಯೆ ಎಂದರೆ ಸಾಹಿತ್ಯ. ಹಾಳು ಹರಟೆ ಮಾತೇ ಅಲ್ಲ; ಅದು ಮಾತಿನ ಹಾಮುಸರೂಪ. ಅಡಿಗೆಯ ಮನೆಯಲ್ಲಿ ಬಳಸುವ ಮಾತು ಬಂದವರು ಕನ್ನಡ ಬಲ್ಲೆವೆಂಬುದೂ ಹಾಳು ಹರಟೆ ಕುರುಡಗತೆಗಳಲ್ಲಿ ಆಸಕ್ತರಾದವರೂ ಮಾತು ಬಲ್ಲವರೆಂಬುದೂ ಒಂದೇ. ವಿಚಾರ ಮತ್ತು ಕಲ್ಪನಾ ಶಕ್ತಿಗಳು ಮತ್ತು ಮಾತು ಪರಸ್ಪರ ಪೋಷಕಗಳು. ವಿಚಾರ ಕಲ್ಪನೆಗಳಿಲ್ಲದವರಿಗೆ ಮಾತು ಒಲಿದಾಳೇ? — ಸುಧನ್ವ

ಇದರಂತೆ ನಾಡಹಬ್ಬಗಳು ಉಡುಪಿ ಪೆರ್ಡೂರಿನ ನವಜೀವನ ಹೈಸ್ಕೂಲ್, ಪೆರ್ಡೂರು ಸತ್ಯನಾರಾಯಣ ಹೈಸ್ಕೂಲ್, ಕಾಸರಗೋಡು ಮುಂತಾದೆಡೆಗಳಲ್ಲೂ ಜರುಗಿವೆ. ಉಡುಪಿಯ ಉತ್ಸವದಲ್ಲಿ ಟಿ ಟಿ. ಶರ್ಮರೂ, ಆರ್ ಕಲ್ಯಾಣಮ್ಮನವರೂ ಭಾಗ ವಹಿಸಿದ್ದರು.

ಕಾರ್ಕಳ ತಾಲೂಕು ಹೊಸಂಗಡಿಯಲ್ಲಿ ಶ್ರೀ ಹೆಗ್ಡೆಯವರ ಅಧ್ಯಕ್ಷತೆಯಲ್ಲಿ ಗ್ರಾಮ ಸಂಘದ ಸಭೆ ನಡೆಯಿತು. ಶಾರದಾ ಪೂಜೆ ನಡೆಯಿತು. ವಾಚನಾಲಯವನ್ನು ಪ್ರಾರಂಭಿಸಬೇಕೆಂದು ಗೊತ್ತಾಯಿತು. ವಾಚನಾಲಯ ಕಟ್ಟಡದ ಅಡಿಗಲ್ಲನ್ನು ಇಡುವ ಸಮಾರಂಭವೂ ನಡೆಯಿತು.

# ಹಿಂದುಸ್ತಾನ

## ಮುಂಬಯಿ

ಮುಂಬಯಿ ಸರಕಾರದ ಮನೆ ಕಟ್ಟುವ ಯೋಜನೆಗೆ ಸಹಾಯ ಮಾಡಲು ಕೇಂದ್ರ ಸರಕಾರವು ೨ ಕೋಟಿ ರೂ. ಸಾಲಕೊಡಲು ನಿರ್ಧರಿಸಿರುವದಾಗಿ ಅಧಿಕೃತವಾಗಿ ತಿಳಿಯುತ್ತದೆ. ಈ ಬಗ್ಗೆ ಮುಂಬಯಿ ಸರಕಾರವು ೪ ಕೋಟಿ ರೂ ಸಾಲ ಕೇಳಿತ್ತು.

ಮುಂಬಯಿಯ ಸುಪ್ರಸಿದ್ಧ ಆಂಗ್ಲ ಪತ್ರಿಕೋದ್ಯೋಗಿಗಳಾದ ಶ್ರೀ ಬಿ. ಜಿ. ಹಾರ್ನಿಮನ್‌ರು ತಾ. ೧೬ ರ ನಸುಕಿನ ೪|| ಗೆ ಮುಂಬಯಿಯ ಮರೀನಾ ಶುಶ್ರೂಷಾಲಯದಲ್ಲಿ ನಿಧನಹೊಂದಿದರೆಂದು ತಿಳಿಸಲು ವಿಷಾದವಾಗುತ್ತದೆ. ಅವರಿಗೆ ನಿಧನ ಕಾಲಕ್ಕೆ ೭೫ ವರ್ಷಗಳಾಗಿದ್ದವು.

ಪುಣೆ ವಿಶ್ವವಿದ್ಯಾಲಯವು ಈ ವರ್ಷದ ಕೊನೆಗೆ ಕಾರ್ಯ ಪ್ರಾರಂಭಿಸಲಿದ್ದು ತಾತ್ಪೂರ್ತಿಕ ಅಂದಾಜು ಪತ್ರವೊಂದು ಸಿದ್ಧವಾಗಿದೆ. ಒಟ್ಟು ೧೪ ಲಕ್ಷ ರೂ. ವೆಚ್ಚ ಬರುವದೆಂದೂ ೮ ಲಕ್ಷ ರೂ. ಕೊರತೆ ಬೀಳುವದೆಂದೂ ಅದರಲ್ಲಿ ಕಾಣಿಸಲಾಗಿದೆ.

ತಾ. ೧೧ ರಿಂದ ಸಂಪು ಹೂಡಿದ ಮುಂಬಯಿ ಧಕ್ಕೆ ಕೆಲಸಗಾರರು ೪೮ ತಾಸುಗಳ ನಂತರ ತಾ. ೧೩ ರಂದು ಅದನ್ನು ಯಾವ ಕರಾರೂ ಹಾಕದೆ ನಿಲ್ಲಿಸಿದರು.

ಕಲ್ಯಾಣ ಗಿರಣಿಯ ಮ್ಯಾನೇಜಿಂಗ ಡಾಯರೆಕ್ಟರರಾದ ಶ್ರೀ ಮೊರರಕಾ ಹಾಗೂ ಆರು ಅಧಿಕಾರಿಗಳನ್ನು ೩ ಲಕ್ಷ ರೂಪಾಯಿ ಬೆಲೆಯ ಬಟ್ಟೆ ಮತ್ತು ಇತರ ಸರಕುಗಳನ್ನು ದುರ್ವಿನಿಯೋಗ ಮಾಡಿದ ಆರೋಪದ ಮೇಲೆ ಬಂಧಿಸಿ ಜಾಮೀನಿನ ಮೇಲೆ ಬಿಡಲಾಗಿದೆಯೆಂದು ತಿಳಿಯುತ್ತದೆ.

ಹೈದರಾಬಾದದ ಅರಾಜಕತೆಯ ಕಾಲದಲ್ಲಿ ಸ್ಥಗಿತಗೊಳಿಸಲಾಗಿದ್ದ ಡೆಕ್ಕನ ಏರವೇಜ ಕಂಪನಿ ವಿಮಾನ ಸಾರಿಗೆಯು ತಾ. ೧೫ ರಿಂದ ಪುನಃ ಪ್ರಾರಂಭವಾಗಿದೆ.

ಮುಂಬಯಿ ಸರಕಾರದವರು ಶ್ರೀ ಜಿ. ಆರ್. ಪರಾಂಜಪೆ ಆಯ. ಇ. ಎಸ್. ಇವರ ಅಧ್ಯಕ್ಷತೆಯಲ್ಲಿ ಸ್ಕೂಲ ಸರ್ಟಿಫಿಕೇಟ ಪರೀಕ್ಷಾ ಮಂಡಳವನ್ನು ರಚಿಸಿರುವರೆಂದು ಸರಕಾರೀ ಪ್ರಕಟನೆ ಹೊರಟಿದೆ. ಅದರಲ್ಲಿ ಕನ್ನಡಿಗರಾದ ವಿ. ರು. ಕೊಪ್ಪಳ ಮತ್ತು ಜಿ. ಎಸ್. ಮೊಖಾಸಿ ಇವರೂ ಇರುವರು.

ಹಿಂದುಸ್ತಾನ ಸರಕಾರದ ಕಾಯದೆ ಮಂತ್ರಿ ಡಾ. ಅಂಬೇಡಕರರು ಭಾಷಾವಾರ ಪ್ರಾಂತ ರಚನಾ ಸಮಿತಿಗೊಪ್ಪಿಸಿದ ನಿವೇದನ ಪತ್ರಿಕೆಯಲ್ಲಿ ಸಂಮಿಶ್ರ ಪ್ರಾಂತಗಳಿಗಿಂತ ಭಾಷಾನುಗುಣಪ್ರಾಂತಗಳೇ ಪ್ರಜಾಪ್ರಭುತ್ವಕ್ಕೆ ಹೆಚ್ಚು ಅನುಕೂಲವೆಂದೂ ಮುಂಬಯಿ ಪಟ್ಟಣವು ಮಹಾರಾಷ್ಟ್ರದಲ್ಲಿ ಸೇರ್ಪಡೆ ಹೊಂದಬೇಕೆಂದೂ ಉಲ್ಲೇಖಿಸಿದ್ದಾರೆ

ಮುಂಬಯಿ ಸರಕಾರದ ಪೂರೈಕೆ ಮಂತ್ರಿ ಶ್ರೀ ದಿನಕರರಾವ ದೇಸಾಯಿಯವರು ಆಹಾರದ ಪುನರ್ನಿಯಂತ್ರಣದ ಯೋಜನೆಯನ್ನು ತಿಳಿಸುತ್ತ, ಪ್ರಾಂತದ ಆಹಾರ ಪರಿಸ್ಥಿತಿ ಸಾಧಾರಣ ಚೆನ್ನಾಗಿದ್ದ ಕಾರಣ ೧೦ ಔನ್ಸು ಸೀದಾ ಪ್ರಮಾಣವನ್ನು ಇಳಿಸಲಾಗುವದಿಲ್ಲವೆಂದು ತಿಳಿಸಿದರು.

ಮುಂಬಯಿ ಗೃಹಮಂತ್ರಿ ಶ್ರೀ. ಮುರಾರಜಿ ಅವರು ಸಂದೇಶ ಎಂಬ ಗುಜರಾಥಿ ದೈನಿಕದ ರಜತ ಮಹೋತ್ಸವದ ಕಾಲಕ್ಕೆ ತಾ. ೧೭ರಂದು ಅದರ ಹೊಸ ಕಟ್ಟಡದ ಉದ್ಘಾಟನ ಮಾಡುತ್ತ ಜಗತ್ತಿನ ಯಾವದೇ ದೇಶದಲ್ಲಿಗಿಂತ ಮುಂಬೈ ಪ್ರಾಂತದಲ್ಲಿ ಪತ್ರಿಕಾ ಸ್ವಾತಂತ್ರ್ಯ ಅಧಿಕವಾಗಿದೆಯೆಂದು ಹೇಳಿದರು.

ಸಾಮ್ಯವಾದಿ ಮುಂದಾಳುಗಳು ಮಹಾಬಳೇಶ್ವರದಲ್ಲಿ ನೆರೆದಿದ್ದು ಈ ವರೆಗಿನ ಕಾರ್ಯದ ಪರಿಶೀಲನೆ, ಮುಂದಿನ ಕಾರ್ಯದ ರೂಪರೇಖೆ, ಅತಿ ಪ್ರಸರಣ, ಕೂಲಿಕಾರ ಚಳವಳಿ, ಯುವಕರ ಚಳವಳಿ, ಭಾಷಾವಾರ ಪ್ರಾಂತ ರಚನೆ, ಭಾರತವು ಬ್ರಿ. ಕಾಮನವೆಲ್ತದಲ್ಲಿ ಉಳಿಯಬೇಕೊ ಬಾರದೊ ಎಂಬಿವೇ ಮೊದಲಾದ ವಿಷಯಗಳನ್ನು ಚರ್ಚಿಸಲಿದ್ದಾರೆಂದೂ ಅದಕ್ಕಾಗಿ ಅವರು ೧೫ ದಿನ ಅಲ್ಲಿ ನಿಲ್ಲಬಹುದೆಂದೂ ತಿಳಿಯುತ್ತದೆ.

## ಸ್ವಾಮಿ ರಮಾನಂದರಿಗೆ ೫ ಲಕ್ಷ ರೂ.

ಹೈದರಾಬಾದ ಸಂಸ್ಥಾನ ಕಾಂಗ್ರೆಸ ಅಧ್ಯಕ್ಷರಾದ ಸ್ವಾಮಿ ರಮಾನಂದ ತೀರ್ಥರಿಗೆ ಹೈದರಾಬಾದದ ಪ್ರಮುಖ ನಾಗರಿಕರು ೫ ಲಕ್ಷ ರೂ.ಗಳ ಹಮ್ಮಿಣಿ ಅರ್ಪಿಸಿ ಅವರು ಹೈದರಾಬಾದಕ್ಕೆ ಸಲ್ಲಿಸಿದ ಸೇವೆಯನ್ನು ಪುರಸ್ಕರಿಸಲು ನಿರ್ಧರಿಸಿದ್ದಾರೆ.

## ಹೊಸದಿಲ್ಲಿ

ಹಿಂದುಸ್ತಾನದಲ್ಲಿ ಸಿಮೆಂಟ ಉತ್ಪಾದನೆಯನ್ನು ೯ ಲಕ್ಷ ೩೦ ಸಾವಿರ ಟನ್ನುಗಳ ವರೆಗೆ ಹೆಚ್ಚಿಸಲು ಹಿಂದುಸ್ತಾನ ಸರಕಾರವು ಅನುಮತಿಕೊಟ್ಟಿದೆಯೆಂದು ತಿಳಿಯುತ್ತದೆ.

ಈಗ ವಾಸಿಂಗಟನ್ನದ ಹಿಂದಿ ರಾಯಭಾರಿ ಕಚೇರಿಯಲ್ಲಿ ಸಲಹೆಗಾರರಾಗಿರುವ ಶ್ರೀ ಆರ್. ಕೆ. ನೆಹರೂ ಅವರನ್ನು ಹಿಂದುಸ್ತಾನ ಸರಕಾರದವರು ಸ್ವೀಡನದಲ್ಲಿ ಹಿಂದಿ ಮಂತ್ರಿಗಳನ್ನಾಗಿ ನೇಮಿಸಲು ನಿರ್ಧರಿಸಿದ್ದಾರೆಂದು ಅಧಿಕೃತ ಪ್ರಕಟನೆ ಹೊರಟಿದೆ.

ಮದ್ರಾಸದಲ್ಲಿ ಸ್ಥಾಪಿತವಾಗಲಿರುವ ಕರ್ನಾಟಕ ಸಂಗೀತ ವಿದ್ಯಾಲಯದ ಯೋಜನೆಯನ್ನು ಸಿದ್ಧಪಡಿಸಲು ಹಿಂದುಸ್ತಾನ ಸರಕಾರವು ಒಂದು ತಾತ್ಪೂರ್ತಿಕ ಸಮಿತಿಯನ್ನು ಏರ್ಪಡಿಸಿದೆ.

ದಿಲ್ಲಿಯಲ್ಲಿ ದಸರೆ ಮತ್ತು ಈದ ಈ ಎರಡೂ ಹಬ್ಬಗಳು ಒಳ್ಳೆ ಸಂಭ್ರಮದಿಂದಲೂ ಶಾಂತತೆಯಿಂದಲೂ ಆಚರಿಸಲ್ಪಟ್ಟವು. ಈದದ ನಿಮಿತ್ತ ನೆರೆದ ೫೦ ಸಾವಿರ ಮುಸಲ್ಮಾನರನ್ನುದ್ದೇಶಿಸಿ ಗ. ಜ. ಶ್ರೀ ರಾಜಗೋಪಾಲಾಚಾರ್ಯರು ಮಾತನಾಡುತ್ತ, ಮನುಷ್ಯನಿಗೆ ಬಾಂಧವ್ಯದಿಂದ ದೊರಕುವ ಸಂತಸವು ಅಬಾಧಿತವಾಗಿದೆ. ಎಂದು ಹೇಳಿದರು. ಸಭೆಯಲ್ಲಿ ಶಿಕ್ಷಣ ಮಂತ್ರಿ ಮೌ. ಅಬುಲ ಕಲಂ ಅಝಾದರೂ ಪ್ರಮುಖ ಹಿಂದೂ ಮತ್ತು ಶೀಖ ನಾಗರೀಕರೂ ಇತರ ಅಧಿಕಾರಿಗಳೂ ಉಪಸ್ಥಿತರಿದ್ದರು.

ಕೇಂದ್ರ ಸರಕಾರದವರು ಸದ್ಯದ ಅನಾವಶ್ಯಕ ವೆಚ್ಚದಲ್ಲಿ ಕಡಿತವನ್ನುಂಟು ಮಾಡಿ ಪ್ರತಿವರ್ಷವೂ ಸುಮಾರು ೧೦ ಕೋಟಿ ರೂಪಾಯಿಗಳನ್ನು ಉಳಿಸಬಹುದೆಂದು ಆರ್ಥಿಕ ಸಮಿತಿಯವರು ತಮ್ಮ ನಡುಗಾಲ ವರದಿಯಲ್ಲಿ ಹೇಳಿದ್ದಾರೆ.

ಹಿಂದುಸ್ತಾನ ಪ್ರಥಮ ಯುದ್ಧನೌಕೆಯಾದ 'ದಿಲ್ಲಿ' ಹಡಗವು ಅಕ್ಟೋಬರ ೨೧ ಕ್ಕೆ ಮುಂಬಯಿಯಿಂದ ಹೊರಟು ಏಳು ವಾರದ ತನ್ನ ಭಾರತದ ಕರಾವಳಿಯ ಸಂಚಾರವನ್ನು ಪ್ರಾರಂಭಿಸಿತು. ಇದರೊಡನೆ 'ಕೃಷ್ಣಾ' 'ಕಾವೇರಿ' 'ಸತಲಜ' ಹಡಗಗಳೂ ಇವೆಯೆಂದು ತಿಳಿಯುತ್ತದೆ.

ಹಿಂದುಸ್ತಾನದಲ್ಲಿ ಕಟ್ಟಿದ ೮ ಸಾವಿರ ಟನ್ನಿನ ಜಲಉಷಾ ಎಂಬ ನೌಕೆಯು ತಾ. ೧೫ ರಂದು ಮೊದಲ ಸಲ ಕಲಕತ್ತೆಗೆ ಹೊರಟಿತು. ಪಂ. ನೆಹರು ಅವರು ಕಳೆದ ಮಾರ್ಚದಲ್ಲಿಯೆ ವಿಶಾಖ ಪಟ್ಟಣದಲ್ಲಿ ಇದನ್ನು ನೀರಿಗಿಳಿಸಿದ್ದರು.

ದಕ್ಷಿಣ ಚಿತ್ರಕಾರರ ಕಲಾ ಪ್ರದರ್ಶನವೊಂದು ದಿಲ್ಲಿಯಲ್ಲಿ ತಾ. ೧೫ ರಂದು ಗ. ಜ. ಶ್ರೀ ರಾಜಾಜಿಯವರಿಂದ ಉದ್ಘಾಟಿಸಲ್ಪಟ್ಟಿತು. ಈ ಚಿತ್ರಕಾರರು ಮದ್ರಾಸದ ಡಾ. ರಾಯಚೌಧರಿಯವರ ಕಲಾ ಶಾಲೆಯಲ್ಲಿ ಶಿಕ್ಷಣ ಪಡೆದವರಿದ್ದಾರೆ. ಈ ಸಂಸ್ಥೆಯು ೧೯೩೧ ರಲ್ಲಿ ಹುಟ್ಟಿದ್ದು ಈ ವರೆಗೆ ೧೭ ಪ್ರದರ್ಶನಗಳನ್ನೇರ್ಪಡಿಸಿ ಸುಮಾರು ಒಂದು ಲಕ್ಷ ರೂ. ಗಳ ಚಿತ್ರಗಳನ್ನು ಮಾರಿ ಚಿತ್ರಗಾರರಿಗೆ ಕೊಡಮಾಡಿದೆಯೆಂದು ತಿಳಿಯುತ್ತದೆ. ರಾಜಾಜಿಯವರು ಭಾಷಣ ಮಾಡುತ್ತ, ರಾಷ್ಟ್ರಕ್ಕಾಗಿ ಕೆಲ ಚಿತ್ರಗಳನ್ನು ಕೊಂಡು ಹಣ ಮಂಜೂರಿಗೆ ಶಾಸನಸಭೆಯಲ್ಲಿ ಈ ಮಾತು ಮಂಡಿಸಿದರೆ ರೂಪಾಯಿಗೆ ಎಷ್ಟು ಚೌರಸಫೂಟು ಚಿತ್ರ ಎಂದು ಕೇಳಿದರೂ ಕೇಳಬಹುದು ಎಂದು ವಿನೋದವಾಗಿ ನುಡಿದರು.

ವಿದ್ಯಾ ಸಂಸ್ಥೆಗಳ ಬೋಧ ಭಾಷೆಯನ್ನು ಕೂಡಲೇ ಸುಧಾರಣೆ ಮಾಡುವದೆಂದರೆ ಓಡುತ್ತಿರುವ ರೇಲ್ವೆ ಗಾಡಿಯನ್ನು ದುರಸ್ತಿ ಮಾಡಲು ಯತ್ನಿಸಿದಂತೆ ಎಂದು ಗ. ಜ. ಶ್ರೀ ರಾಜಾಜಿಯವರು ಡೆಹರಾಡೂನದಲ್ಲಿ ಒಂದು ಶಾಲೆಯ ಸಮಾರಂಭದಲ್ಲಿ ಭಾಷಣ ಮಾಡುತ್ತ ಹೇಳಿದರು.

ಹಿಂದುಸ್ತಾನ ಸರಕಾರದ ಉಪ ಮುಖ್ಯ ಮಂತ್ರಿಗಳಾದ ಸರದಾರ ವಲ್ಲಭಭಾಯಿ ಪಟೇಲರಿಗೆ ನಾಗಪುರ ವಿಶ್ವವಿದ್ಯಾಲಯದವರು ತಾ. ೩೧ ನೇ ದಿನ ಜರುಗುವ ಪದವೀದಾನ ಸಮಾರಂಭದ ಕಾಲಕ್ಕೆ ಎಲ್‌ಎಲ್. ಡಿ. ಪದವಿಯನ್ನು ಕೊಟ್ಟು ಗೌರವಿಸಬೇಕೆಂದು ನಿರ್ಧರಿಸಿದ್ದಾರೆ.

## ಪಶ್ಚಿಮ ಬಂಗಾಲ

ಪಾಕಿಸ್ತಾನದಲ್ಲಿ ಹಿಂದೀ ಹೈಕಮಿಶನರರಾದ ಶ್ರೀ ಪ್ರಕಾಶರು ತಾ. ೧೦ ಕ್ಕೆ ಕಲಕತ್ತೆಯಲ್ಲಿ ಪೂರ್ವ ಬಂಗಾಲದಿಂದ ಗುಳೇ ಬರುವ ಹಿಂದೀಯರ ಬಗ್ಗೆ ಪ. ಬಂಗಾಲ ಅಧಿಕಾರಿಗಳೊಡನೆ ಚರ್ಚೆ ಮಾಡಿದರು. ಪಶ್ಚಿಮ ಪಾಕಿಸ್ತಾನದಲ್ಲಿ ಗಣ್ಯ ಅಲ್ಪಸಂಖ್ಯಾಕ ಹಿಂದುಗಳು ಉಳಿದೇ ಇಲ್ಲವೆಂದೂ ೧೪ ಲಕ್ಷ ಹಿಂದುಗಳಲ್ಲಿ ಕೇವಲ ೨ ಲಕ್ಷದಷ್ಟು ಮಾತ್ರ ಉಳಿದಿದ್ದಾರೆಂದೂ ಒಂದು ಸಂದರ್ಭದಲ್ಲಿ ಅವರು ನುಡಿದರಲ್ಲದೆ ಪೂರ್ವ ಬಂಗಾಲದಲ್ಲಿ ಹಿಂದುಗಳ ವಿತ್ತ ಜೀವಿತಗಳು ಸುರಕ್ಷಿತವಿಲ್ಲದ್ದರಿಂದೇ ಪ್ರತಿದಿನ ೩ ಸಾವಿರದಷ್ಟು ಹಿಂದುಗಳು ಅಲ್ಲಿಂದ ಹೊರಟು ಬರುತ್ತಿರುವರೆಂದು ಅರುಹಿದರು. ಭಾರತ ಪಾಕಿಸ್ತಾನಗಳೆರಡಕ್ಕೂ ಒಂದೇ ನಾಗರಿಕತ್ವ ಹಾಗೂ ಸಂರಕ್ಷಣೆಯ ವ್ಯವಸ್ಥೆ ಇದ್ದುವಾದರೆ ಎರಡೂ ರಾಷ್ಟ್ರಗಳಲ್ಲಿ ಶಾಂತಿ ಸೌಹಾಗಳು ಶಾಶ್ವತವಾಗಿ ನೆಲಸುವವೆಂದು ಅಭಿಪ್ರಾಯಪಟ್ಟರು.

ಪೂರ್ವ ಪಾಕಿಸ್ತಾನದ ಹಿಂದುಗಳಿಗೆ ಮಂತ್ರಿ ಪದಗಳನ್ನೂ ದೊಡ್ಡ ದೊಡ್ಡ ಅಧಿಕಾರಗಳನ್ನೂ ಕೊಟ್ಟು ಅಲ್ಪಸಂಖ್ಯಾಕರಲ್ಲಿ ವಿಶ್ವಾಸ ಹುಟ್ಟಿಸಬೇಕೆಂದೂ ಹಿಂದುಗಳ ಬಗ್ಗೆ ಪಾಕಿಸ್ತಾನವು ತಾಳ್ಮೆಯಿಂದ ವರ್ತಿಸಬೇಕೆಂದೂ ಸಂಯುಕ್ತ ಬಂಗಾಲದ ಹಿಂದಿನ ಮುಖ್ಯ ಮಂತ್ರಿಗಳಾದ ಜ. ಸುಹ್ರವರ್ದಿಯವರು ಈದ ವಿಜಯ ಸಭೆಯಲ್ಲಿ ಮಾತನಾಡುತ್ತ ಹೇಳಿದರು.

ತಾ ೧೫ ರಂದು ಕಲಕತ್ತೆಗೆ ಕಲ್ಲಿದ್ದಲಿಗಾಗಿ ಬಂದ ಗ್ರೀಕ ಹಡಗವೊಂದರಲ್ಲಿ ೨ ಆಕಳನ್ನು ಕಂಡು ಅಲ್ಲಿ ಕೆಲಸಮಾಡುತ್ತಿದ್ದ ಧಕ್ಕೆ ಕೆಲಸಗಾರರು ಗೊಂದಲವೆಬ್ಬಿಸಿದರು. ಹಡಗವು ಈ ಬಂದರದಲ್ಲಿರುವ ವರೆಗೆ ಗೋವಧೆ ಮಾಡಗೊಡುವದಿಲ್ಲವೆಂದು ಪೋಲೀಸ ಅಧಿಕಾರಿಗಳು ಹೇಳಿದರೂ ಜನರು ಚದುರದ್ದರಿಂದ ಗುಂಡು ಹಾಕಿ ಅವರನ್ನು ಚದುರಿಸಬೇಕಾಯಿತೆಂದು ತಿಳಿಯುತ್ತದೆ

---

ಕೇಂದ್ರ ಸರಕಾರದ ಸಂಸ್ಥಾನ-ಶಾಖೆಯ ಕಾರ್ಯದರ್ಶಿಗಳಾದ ಶ್ರೀ. ಮೆನನ್ನರನ್ನು ಆ ಶಾಖೆಯ ರಾಜಕೀಯ ಸಲಹೆಗಾರರೆಂದು ನೇಮಿಸಲಾಗಿದೆ. ಶ್ರೀ. ವಿ. ಕೆ. ವೆಲ್ಲೋಡಿಯವರನ್ನು ಅವರ ಸ್ಥಳದಲ್ಲಿ ಕಾರ್ಯದರ್ಶಿಯೆಂದು ನೇಮಿಸಲಾಗಿದೆ.

ಕಾಂಗ್ರೆಸ ಅಧ್ಯಕ್ಷರ ಚುನಾವಣೆಯು ಇದೇ ೨೪ ಕ್ಕೆ ನಡೆಯಲಿದ್ದು ಸಂಯುಕ್ತಪ್ರಾಂತ ಶಾಸನ ಸಭೆಯ ಅಧ್ಯಕ್ಷರಾದ ಬಾಬು ಪುರುಷೋತ್ತಮದಾಸ ತಂಡನ ಮತ್ತು ಡಾ. ಪಟ್ಟಾಭಿ ಸೀತಾರಾಮಯ್ಯ ಇವರೀರ್ವರ ನಡುವೆ ಸ್ಪರ್ಧೆ ನಡೆಯಲಿದೆ. ಡಾ. ರಾಜೇಂದ್ರ ಪ್ರಸಾದ, ಆಚಾರ್ಯ ಕೃಪಲಾನಿ, ಡಾ. ಘೋಷ ಮತ್ತು ಶ್ರೀ. ಶಂಕರರಾವ ದೇವ ಈ ನಾಲ್ವರ ಹೆಸರುಗಳೂ ಸೂಚಿಸಲ್ಪಟ್ಟಿದ್ದವು. ಆದರೆ ಇವರು ತಮ್ಮ ಹೆಸರುಗಳನ್ನು ಹಿಂತೆಗೆದುಕೊಂಡಿರುವರು.

---



---

## ಮದ್ರಾಸ

ಫ್ರೆಂಚ ಹಿಂದುಸ್ತಾನದ ೫ ನಗರಗಳಲ್ಲಿ ಇದೇ ತಾ. ೨೪ ಕ್ಕೆ ಮುನಸಿಪಲ್ ಚುನಾವಣೆ ನಡೆಯಲಿದ್ದು ಈ ಬಗ್ಗೆ ಹಿಂದುಸ್ತಾನ ಸರಕಾರಕ್ಕೆ ಏನೂ ತಿಳಿಸಲಾಗಿಲ್ಲವೆಂದೂ ಈ ಚುನಾವಣೆ ಮುಂದೂಡಬೇಕು ಅಥವಾ ಹಿಂದುಸ್ತಾನ ಸರಕಾರವು ತನ್ನ ನಿರೀಕ್ಷಕರನ್ನು ಈ ಸಂದರ್ಭದಲ್ಲಿ ಕಳಿಸಬೇಕೆಂಬು ಅಲ್ಲಿಯ ಹಿಂದೀಯರ ಆಶೆಯಿದೆ. ಇನ್ನೊಂದು ವಿಶೇಷ ಸಂಗತಿಯೆಂದರೆ ಫ್ರೆಂಚ ಮಹಿಳೆಯ ನೇತೃತ್ವದಲ್ಲಿ ನಡೆದ ಅರವಿಂದಾಶ್ರಮವೂ ಸ್ಥಳೀಯ ಕಪ್ಪಂಗಿಯವರೂ ಪಾಂಡಿಚೇರಿಯಲ್ಲಿ ಫ್ರೆಂಚರಿಗೆ ಅನುಕೂಲರಾಗಿ ವರ್ತಿಸುತ್ತಿದ್ದಾರೆಂದು ವಾರ್ತೆ ಬಂದಿದೆ.

ಹೈದರಾಬಾದ ತೊಡಕು ಈಗ ಬಗೆಹರಿದದ್ದರಿಂದ ತುಂಗಭದ್ರಾ ಆಣೆಕಟ್ಟಿನ ಕಾರ್ಯವು ಇನ್ನು ಬೇಗ ಬೇಗ ಸಾಗುವದೆಂದು ಲೋಕೋಪಯೋಗಿ ಶಾಖೆಯ ಮಂತ್ರಿ ಶ್ರೀ ಭಕ್ತವತ್ಸಲಂ ಅವರು ಒಂದು ಸಂದರ್ಶನದಲ್ಲಿ ಹೇಳಿದರು. ಮದ್ರಾಸ ಹೈದರಾಬಾದ ಈ ಎರಡೂ ಸರಕಾರಗಳ ಬದಲು ಈ ಕಾರ್ಯವನ್ನು ಒಂದೇ ಸರಕಾರಕ್ಕೆ ಒಪ್ಪಿಸುವ ಬಗ್ಗೆಯೂ ವಿಚಾರ ನಡೆದಿದೆಯೆಂದು ತಿಳಿಯುತ್ತದೆ.

ಮಧುರಾದಲ್ಲಿ ತಾ. ೯ ರ ಸಂಜೆ ಒಂದು ಬೀದಿಯಲ್ಲಿ ಬೆಂಕಿ ಹತ್ತಿ ೫೦೦ ಗುಡಿಸಲುಗಳು ಬೂದಿಯಾದವೆಂದೂ ಜನರ ಪ್ರಾಣಹಾನಿಯಾಗಿರದಿದ್ದರೂ ೪ ದನಗಳು ಸತ್ತವೆಂದೂ ೧ ಲಕ್ಷ ರೂಪಾಯಿಯ ಆಸ್ತಿಯು ಭಸ್ಮವಾಗಿದೆಯೆಂದೂ ವಾರ್ತೆ ಬಂದಿದೆ ಇನ್ನೊಂದು ವಿಚಿತ್ರ ಘಟನೆಯೆಂದರೆ ಭಸ್ಮವಾದ ಒಂದು ಗುಡಿಸಿಲಿನಲ್ಲಿದ್ದ ಮಹಾತ್ಮಾಗಾಂಧಿಯವರ ಮಣ್ಣಿನ ಪ್ರತಿಮೆಗೆ ಮಾತ್ರ ಏನೂ ಧಕ್ಕೆ ಸಂಭವಿಸಿಲ್ಲವೆಂದು ತಿಳಿಯುತ್ತದ.

ಮದ್ರಾಸ ಪ್ರಾಂತದ ತ್ರಿಚನಾಪಳ್ಳಿ, ಮದುರಾ, ದಕ್ಷಿಣ ಅರ್ಕಾಟ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿಯ ೧೭ ಮುನಸಿಪಲ್ ನಗರಗಳಲ್ಲಿ ಆಹಾರ ಸೀದಾ ಪದ್ಧತಿಯನ್ನು ಇದೇ ನವೆಂಬರ ೧೫ ತಾ. ನಿಂದ ಪುನಃ ಪ್ರಾರಂಭಿಸಲು ಮದ್ರಾಸ ಸರಕಾರವು ನಿರ್ಧರಿಸಿದೆ. ಪ್ರೌಢರಿಗೆ ೮ ಔನ್ಸು ಅಕ್ಕಿ ಕೊಡಲಾಗುವುದು.

ಎರ್ನಾಕುಲಂದಿಂದ ೩ ಮೈಲು ದೂರಿರುವ ಆಯಂಪಳ್ಳಿ ಗ್ರಾಮದ ಜಮೀನುದಾರ ಮತ್ತು ಅವನ ಮೊಮ್ಮಗನನ್ನು ಯಾರೋ ಇರಿದು ಕೊಂದಿದ್ದು ಮನೆಯವರಿಬ್ಬರು ಗಾಯಗೊಂಡಿರುವರೆಂದು ತಿಳಿದುಬಂದಿದೆ. ಅವರೊಡನೆ ತಂಟೆ ಮಾಡಿದ ರೈತನೊಬ್ಬನು ಉರುಲು ಹಾಕಿಕೊಂಡು ಆತ್ಮಹತ್ಯೆ ಮಾಡಿಕೊಂಡಿರುವನೆಂದೂ ತಿಳಿಯುತ್ತದೆ.

## ದೀಪಾವಳಿಯ ನಾಲ್ಕು ತಿನಸುಗಳು

( ೧೧ ನೆಯ ಪುಟದಿಂದ )

ಗಳನ್ನು ತೆಗೆದು ಅದರೊಳಗೆ ೧/೪ ಪ್ರಮಾಣದಷ್ಟು ಬೆಲ್ಲವನ್ನು ಬೆರಸಿ ಅದನ್ನು ಒರಳಲ್ಲಿ ಹಾಕಿ ಚೆನ್ನಾಗಿ ಕುಟ್ಟಬೇಕು. ಅದನ್ನು ಹೆಚ್ಚು ಕುಟ್ಟಿದಷ್ಟೂ ಉತ್ತಮ. ನಂತರ ಆ ಮುದ್ದೆಯನ್ನು ಕಣಕದ ಉರುಳಿಯಲ್ಲಿ ಹಾಕಿ ಲಟ್ಟಿಸಬೇಕು. ಆ ಹೋಳಿಗೆಯನ್ನು ಹಂಚಿನಮೇಲಿಂದ ತೆಗೆದು ಪೊಳ್ಳು ಮಾಡಿ ಆರಿಸಬೇಕು. ಆ ಹೋಳಿಗೆ ತಂಗಳಾದಷ್ಟೂ ರುಚಿ ಹೆಚ್ಚು. ಅದರ ಜೊತೆಗೆ ಸಾಕಷ್ಟು ತುಪ್ಪ ಮಾತ್ರ ಹಾಕಬೇಕು, ಈ ಹೋಳಿಗೆಯು ಅತ್ಯಂತ ಪೌಷ್ಟಿಕವಾಗಿದ್ದು ನಿಮ್ಮ ಅಣ್ಣ ತಂಮ್ಮಂದಿರ ಆರೋಗ್ಯವನ್ನು ಹೆಚ್ಚಿಸುವದು.

### (೪) ದಹಿ ಮಮ್ಮರಾ

ಇದೊಂದು ಗುಜರಾತಿ ತಿನಿಸು. ಚಹಾ ಫಳಾರದ ಕಾಲಕ್ಕೆ ತೆಗೆದುಕೊಳ್ಳಲು ಸರಿ ಹೋಗುವದು.

ಮಾಡುವ ರೀತಿ- ಬುರಬುರಿಯನ್ನು ನೀವು ಮಾಡಿರಬಹುದು. ಬುಂದೇ ಕಾಳನ್ನು ನೀವು ಅನೇಕ ಬಾರಿ ಕರಿದಿರಬಹುದು. ಸರಿ ಹಾಗಾದರೆ ಬುರುಬುರಿ ಹಿಟ್ಟನ್ನು ತೆಗೆದುಕೊಂಡು ಬುಂದೇದ ಕಾಳಿನಂತೆ, (ಅಷ್ಟು ಸಣ್ಣ ಮಾಡಿ) ಕರಿದು ತೆಗೆಯಿರಿ, ಪುಟ್ಟ ಪುಟ್ಟ ಒರಬರಿಗಳಾಗಬಹುದು. ಅದಕ್ಕೆ ಗುಜರಾತಿ ಜನರು 'ಮಮ್ಮರಾ' ಎಂದೆನ್ನುತ್ತಾರೆ. ಕೆಲವು ಚಹಾದ ಅಂಗಡಿಯಲ್ಲಿ ಅವುಗಳನ್ನು ಮಾಡಿ "ಖಾರಾ ಬುಂದಿ" ಎಂದು ಕರೆಯುತ್ತಾರೆ. ಅವನ್ನು ತಿನ್ನಲಿಕ್ಕೆ ಕೊಡುವ ಮುಂದೆ ಮೊಸರೊಳಗೆ ಕೂಡಿಸಿ ಮೇಲೆ ಸ್ವಲ್ಪ ಖಾರಪುಡಿ ಇಲ್ಲವೆ ಚಟ್ನಿಪುಡಿ ಉದುರಿಸಿ ಕೊಡಬೇಕು. ಒಂದು ವಿಶೇಷ ಸೂಚನೆಯೆಂದರೆ ಅವುಗಳನ್ನು ಮೊಸರೊಳಗೆ ಕೂಡಿಸಿ ಬಹಳ ಹೊತ್ತು ಇಡಬಾರದು.

## ವಿದ್ಯಾರ್ಥಿಗಳು

ಅಮೇರಿಕದ ಜಿರಾಲ್ಡೈನ್ ಕೋರ್ಟ್ನಿ ಎಂಬ ಉಪಾಧ್ಯಾಯಿನಿಯೊಬ್ಬಳು ಅಲ್ಲಿಯ ಹೈಸ್ಕೂಲು ವಿದ್ಯಾರ್ಥಿ ವಿದ್ಯಾರ್ಥಿನಿಯರ ನಡತೆ ಹೇಗೆ ಕೆಟ್ಟಿದೆ ಎಂಬುದನ್ನೂ ಅದರ ಹೊಣೆ ಹೇಗೆ ಶಿಕ್ಷಕ ಶಿಕ್ಷಕಿಯರಿಗಿಂತ ಹೆಚ್ಚಾಗಿ ತಾಯ್ತಂದೆಯರಿಗೇ ಇದೆ ಎಂಬುದನ್ನೂ ಅನುಭವದಿಂದ ಬರೆಯುತ್ತಾಳೆ:

“ನಾನೂ ಒಬ್ಬಳು ವಿದ್ಯಾರ್ಥಿನಿಯಾಗಿದ್ದೆ. ಈಗ ಒಂದು ಹೈಸ್ಕೂಲಿನಲ್ಲಿ ಶಿಕ್ಷಕಿಯಾಗಿದ್ದೇನೆ. ಹೈಸ್ಕೂಲಿಗೆ ಹುಡುಗರು ಹೋದೊಡನೆಯೇ ಅವರಲ್ಲಿ ಹಲವರು ಅಲ್ಲಿಯ ವಿಷಯಸುಖವಾದದ, ಶೂನ್ಯವಾದದ, ನಾಸ್ತಿಕವಾದದ ವಾತಾವರಣದಲ್ಲಿ ಬೆರೆದು ಒಂದಾಗಿ ಹೋಗಿ ಭಾವನೆಯಿಂದಲೂ ಶರೀರ ಪ್ರಕೃತಿಯಿಂದಲೂ ಕಾಮುಜೀವನದತ್ತ ಲಕ್ಷಹಾಕುತ್ತಾರೆ. ಅದರಿಂದ ಅವರು ಕೆಲವೇ ದಿನಗಳಲ್ಲಿ ಶೃಂಗಾರ ಸಾಹಸಗಳನ್ನು ಅವರಿವರಿಂದ ಕೇಳಿ ತಾವೂ ಹಾಗೆಯೇ ತಮ್ಮ ಹಿರಿಯಣ್ಣರ ಚಾಳಿಯಲ್ಲಿ ತರಬೇತು ಹೊಂದಿ ಸ್ಪರ್ಧೆ ಹೆಮ್ಮೆಗಳಿಗೊಳಗಾಗಿ ಬಾಲಿಕೆಯರನ್ನು ಆಕರ್ಷಿಸುವ ನಡೆನುಡಿಗಳನ್ನು ಕಲಿತು ಆಚರಿಸಲು ತೊಡಗುತ್ತಾರೆ.

ಅದೇ ಕಾಲದಲ್ಲಿ ಹುಡುಗಿಯರಲ್ಲೂ ಒಂದು ಬಗೆಯ ಭಾವ ವಿಕಾರವುಂಟಾಗಿರುತ್ತದೆ. ಅವರ ವಾತಾವರಣದಲ್ಲೂ ನಾಗರಿಕಂಮನ್ಯ ಹುಡುಗಿಯರ ಸಾಹಸ ಕಥೆಗಳು, ಕಳ್ಳಾಟಿಕೆಗಳು, ಹೆಮ್ಮೆಯ ವರದಿಗಳು ಮತ್ತು ಸಾಮ್ರಾಜಿಕ ವಿಜಯ ವಾರ್ತೆಗಳು ಹಬ್ಬಿದ್ದು, ಅವು ಅವರ ಮನವನ್ನು ಆಗಲೇ ದುರ್ಬಲಗೊಳಿಸುತ್ತಿರುವುವು. ಅವರೂ ಅದರಿಂದ ಕೇವಲ ಸ್ವಾರ್ಥಿಗಳೂ ಚಾರ್ವಾಕರೂ ಆಗಹತ್ತುತ್ತಾರೆ.

“ನನಗೆ ಇಬ್ಬರು ತಾಯಂದಿರ ಗುರುತಿದೆ. ಅವರು ತಂತಮ್ಮ ಮಗಳನ್ನು ಒಳ್ಳೆಯ ಶಾಲೆಗೆ ಹಾಕಿದರು; ಒಳ್ಳೆಯ ಗೆಳತಿಯರ ಸಹವಾಸದಲ್ಲಿಟ್ಟರು; ಆದರೆ ಕಣ್ಣು ಕಿವಿ ಮುಚ್ಚಿಕೊಂಡು ಅವರ ಮಕ್ಕಳ ಕೃತಕ ಮುಗ್ಧತೆಯನ್ನು ನಂಬಿ ಒಮ್ಮೆ ಅಕಸ್ಮಾತ್ತಾಗಿ ಅವರ ದುರ್ನೀತಿಯನ್ನು ಕಂಡು ಬೆಕ್ಕಸ ಬೆರಗಾದರು. ಆಗ ಶಾಲೆಗೆ ದೂರುಕೊಟ್ಟರು. ಶಾಲೆಯ ಶಿಕ್ಷಿಕೆ ತನಿಖೆ ನಡೆಸಿದಾಗ ಸಿಕ್ಕಿಬಿದ್ದ ಒಬ್ಬ ಬಾಲಿಕೆ ಮಿಕ್ಕ ಕಳ್ಳೆಯರನ್ನು ಬಯಲಿಗೆಳೆದಳು. ಆಗ ೩೧ ಹುಡುಗಿಯರಲ್ಲಿ ೧೭ ಹುಡುಗಿಯರು ಅಪರಾಧಿಗಳಾಗಿ ಸಿಕ್ಕಿದ್ದರಿಂದ ಶಿಕ್ಷಿಕೆ ಏನೂ ಮಾಡಲಾರದೆ ಅವರೆಲ್ಲರನ್ನೂ ಹಾಗೆಯೇ ಬಿಟ್ಟುಬಿಟ್ಟಳು!

“ಹುಡುಗಿ ತಾನೊಬ್ಬ ಗೆಳೆಯನನ್ನು ಸಂಪಾದಿಸಿಕೊಂಡರೆ, ಹೆಮ್ಮೆಯಿಂದ ತನ್ನ ಗೆಳತಿಯರ ಮುಂದೆ ತಿರುಗುತ್ತಾಳೆ. ಅದರಲ್ಲೂ ಒಬ್ಬನಿಗಿಂತ ೨-೩ ಜನರನ್ನು ಸಂಪಾದಿಸಿಕೊಂಡಾಕೆಗೆ ಮತ್ತಷ್ಟು ಮಾನ್ಯತೆ ಅವರಲ್ಲಿ! ಪ್ರತಿವರ್ಷ ಹೀಗೆ ಹೈಸ್ಕೂಲು ಮತ್ತು ಕಾಲೇಜುಗಳ ಅಧಿಕಾರಿಗಳಿಗೆ ದಿನೇದಿನೇ ಈ ಸ್ವಚ್ಛಂದ ಪ್ರಣಯ ಅಪಾಯಕರವಾಗಿ ಕೊನೆಗಾಣುವ ಪ್ರಕರಣಗಳು ಹೆಚ್ಚಾಗುತ್ತಿರುವುದು ಕಂಡು ಬಂದಿದೆ. ಇದಕ್ಕೆ ಈಗಿನ ವಿದ್ಯಾಭ್ಯಾಸ ಕ್ರಮದಲ್ಲಿ ಶಿಕ್ಷಕ ಶಿಕ್ಷಿಕೆಯರನ್ನು ದೂರುವುದು ನ್ಯಾಯ್ಯವಲ್ಲ. ಕೇವಲ ೬-೫ ತಾಸುಗಳಷ್ಟು ಕಾಲ—ಅದೂ ಭಿನ್ನಭಿನ್ನ ವಿಷಯಗಳನ್ನು ಭಿನ್ನ ವರ್ಗದವರಿಗೆ ಭಿನ್ನ ಉಪಾಧ್ಯಾಯರು ಇರುವಾಗ— ತಮ್ಮ ಕೈಕೆಳಗಿರುವ ಹುಡುಗ ಹುಡುಗಿಯರ ಮೇಲೆ ನೈತಿಕ ಪ್ರಭಾವವನ್ನು ಹೇಗೆ ಬೀರಬಲ್ಲರು? ಅದೂ ಅಲ್ಲದೆ ನಮ್ಮ ನೀತಿಯನ್ನು ಕಟ್ಟಿಕೊಂಡು ಇವರಿಗಾದರೂ ಏನು? ನಮ್ಮನಮ್ಮ ವಿಶಿಷ್ಟ ವಿಷಯಗಳನ್ನು ಕಲಿಸುವುದಕ್ಕಿಂತ ಏಕೆ ತಾಯ್ತಂದೆಯ ಹೆಚ್ಚಿನದನ್ನು ನಮ್ಮಿಂದ ಯಾವ ಅಧಿಕಾರದ ಬಲದಿಂದ ನಿರೀಕ್ಷಿಸಬಲ್ಲರು? ಆದ್ದರಿಂದ ಯೋಗ್ಯ ಕಾಲದಲ್ಲಿ ಕಾಮಶಿಕ್ಷಣ ತಕ್ಕಂತೆ ಕೊಡುವುದು ಸದ್ಯದ ಪರಿಸ್ಥಿತಿಯಲ್ಲಿ ತಂದೆತಾಯಿಗಳ ಕರ್ತವ್ಯ ಎಂದು ನನ್ನ ದೃಢವಾದ ಅಭಿಪ್ರಾಯ. ಅವರು ಕೊಡಲು ತಪ್ಪಿದರೆ ಯಾವ ದೃಷ್ಟಿಯಿಂದಲೂ ಅವರು ಆತ್ಮಸಮರ್ಥನೆ ಮಾಡಿಕೊಳ್ಳಲಾರರು; ಮಕ್ಕಳು ಮುಂದೆ ಸಮಾಜ ಕಂಟಕರಾದರೆ ಅದರ ಹೊಣೆ ಅವರದೇ”

ಮೇಲಿನ ಅಭಿಪ್ರಾಯಸಾರವನ್ನು ಎಲ್ಲ ತಾಯ್ತಂದೆಯರ ಅವಗಾಹನೆಗಾಗಿ ಕೊಡಲಾಗಿದೆ. ಬಾಲಕ ಬಾಲಿಕೆಯರಲ್ಲಿ ಪ್ರಾಯ ಬರುವವರೆಗೆ ನಿರ್ಭೇದವಾದ ಉಡಿಗೆ ತೊಡಿಗೆ, ವಿನೋದ ವಿಹಾರ, ಆಚಾರ ವಿಚಾರ, ವಿದ್ಯೆ ಶೀಲಗಳಿರುವಂತೆ ಸಹ ವಿದ್ಯಾಭ್ಯಾಸ ವಿಟ್ಟು ಅನಂತರ ಅವರ ಶಾರೀರಿಕ ಮತ್ತು ಕೌಟುಂ

## ಉಮಿ (ಭತ್ತದ ಹೊಟ್ಟು)

ನಿರುಪಯೋಗಿ ವಸ್ತುಗಳ ಉಪಯೋಗ ಮಾಡಿಕೊಳ್ಳಲು ಜಾಣ್ಮೆ ಇದ್ದಷ್ಟು ಸಾಲದು. ಒಂದು ಉದ್ಯಮವು ಅತ್ಯುತ್ತಮವಾಗಿ ಸಾಗಬೇಕಾದರೆ ಅದರ ನಿರುಪಯೋಗಿ ವಸ್ತು ಭಾಗಗಳೆಲ್ಲ ಉಪಯೋಗಕ್ಕೆ ಬರುವಂತೆ ಯೋಜಿಸಬೇಕು. ಬೇಸಾಯವೇ ಮುಖ್ಯ ಉದ್ಯಮವಾದ ಭಾರತದೇಶದಲ್ಲಿ ಭತ್ತ ಕುಟ್ಟುವದು ಒಂದು ಮಹತ್ವದ ಧಂದೆಯಾಗಿದೆ. ಪ್ರತಿವರ್ಷ ಸುಮಾರು ೨೭॥ ಲಕ್ಷವನ್ನು ಭತ್ತಕುಟ್ಟುವ ಹಳ್ಳಿಗರಲ್ಲದೆ ಎಂಜಿನ್ನುಗಳಿಂದ ನಡೆಯುವ ಎಷ್ಟೋ ಗಿರಣಿಗಳಿದ್ದಾವೆ. ಈ ಗಿರಣಿಗಳಿಂದಲೇ ಸುಮಾರು ೧೦ ಲಕ್ಷ ಟನ್ನು ಒಟ್ಟು ಉಮಿ ಹೊರಡುತ್ತದೆ. ಹಳ್ಳಿಗಳಲ್ಲಿಂತೂ ಮನೆಮನೆಯಲ್ಲಿ ಉಮಿಯ ರಾಶಿ ಬಿದ್ದಿರುತ್ತದೆ. ಈ ಹೊಟ್ಟನ್ನೊಯ್ದು ಹೊರಗೆ ಚೆಲ್ಲಲಿಕ್ಕಾಗಿಯೇ ಗಿರಣಿಗಳಲ್ಲಿ ಎಷ್ಟೋ ಹಣ ಖರ್ಚಾಗುತ್ತದೆ. ಹಳ್ಳಿಗಳಲ್ಲಿ ಭತ್ತಕುಟ್ಟುವವರು ಉಮಿ, ಧೂಳು, ನುಚ್ಚು ಅಕ್ಕಿಗಳನ್ನು ಬೇರೆ ಬೇರೆಯಾಗಿ ಮಾಡಿಕೊಡುತ್ತಾರೆ. ಧೂಳು ದನಕರುಗಳಿಗೆ ಆಹಾರ. ಗಿರಣಿಗಳಲ್ಲಿ ಉಮಿ ಧೂಳುಗಳೆಲ್ಲ ಕೂಡಿಕೊಂಡು ಬಿಡುತ್ತವೆ. ಇದರಿಂದ ದನಕರುಗಳಿಗೆ ಆಹಾರದ್ರವ್ಯವಿಷ್ಟೇ ಕಡಿಮೆಯಾದಂತೆ; ಸತ್ವವುಳ್ಳ ಈ ಹೊಟ್ಟು ಧೂಳುಗಳನ್ನು ಸುಟ್ಟುಬಿಡುತ್ತಾರೆ. ಬ್ರಹ್ಮದೇಶದಲ್ಲಿ ಹೊಟ್ಟನ್ನು ಗಿರಣಿಯ ಉರುವಲಿಗಾಗಿ ಉಪಯೋಗಿಸುತ್ತಾರಂತೆ. ಅಮೇರಿಕೆಯ ಭತ್ತಬೆಳೆಯುವ ಪ್ರದೇಶದಲ್ಲಿಯೂ ಹೆಚ್ಚುಕಡಿಮೆ ಹೀಗೇ ಮಾಡುತ್ತಾರೆ.

ಈ ರೀತಿ ಹೊಟ್ಟನ್ನು ಸುಡುವದು ಅದನ್ನು ತೀರಿಸಿಬಿಡುವ ಸುಲಭೋಪಾಯವಾದರೂ ಅದರಿಂದ ಉಪಯೋಗ ಪಡೆಯದಿರುವದು ದಡ್ಡತನವೇ; ಬೆರಣಿ (ಕುರುಳು) ಮಾಡುವಾಗ ಸೆಗಣಿಯೊಡನೆ ಹೊಟ್ಟು ಸೇರಿಸುತ್ತಾರೆ. ಕುಂಬಾರ ಚಿನಿವಾರರಿಗೆ ಸಣ್ಣದಾಗಿ ಬಹಳ ಹೊತ್ತು ಉರಿಯುವ ಬೆಂಕಿಬೇಕು. ಅದಕ್ಕೆ ಉಮಿ ಬಹಳ ಉಪಯೋಗಕ್ಕೆ ಬೀಳುತ್ತದೆ.

ರಟ್ಟನ್ನು ತಯಾರಿಸಲು ಉಮಿಯು ಉಪಯೋಗ ಬೀಳುತ್ತದೆ. ಉಮಿಯಿಂದ ವಿಟಾಮಿನ್ ‘ಈ’ ತೆಗೆಯಲು ಸಾಧ್ಯವಿದೆಯೆಂದು ಕೆಲವರ ಅಭಿಪ್ರಾಯವಿದೆ. ಪ್ರಯೋಗದಿಂದ ಅದನ್ನು ಕಂಡು ಹಿಡಿಯಬೇಕಾಗಿದೆ. ಕೇರಳದಲ್ಲಿ ಉಮಿಯನ್ನು ಸುಟ್ಟು ಹಲ್ಲುಪುಡಿ ತಯಾರಿಸುತ್ತಾರೆ. ಹಣ್ಣು, ತತ್ತಿಗಳನ್ನು ಪೆಟ್ಟಿಗೆಗಳಲ್ಲಿ ಕಟ್ಟಲು (pack) ಇದು ತುಂಬ ಉಪಯೋಗವಾಗುತ್ತದೆ. ಕೋಳಿಯ ಗೂಡಿನಲ್ಲಿ ಇದನ್ನು ತರವಾಗಿ ಹಾಕಿದರೆ ತತ್ತಿಗಳಿಗೆ ಹಿತ. ಮಲಬಾರದಲ್ಲಿ ಶುಂಠಿಯ ಸಸಿಯ ಬುಡಕ್ಕೆ ಉಮಿಯನ್ನು ಹಾಕುತ್ತಾರೆ. ಇದರಿಂದ ಬೇರು ಚೆನ್ನಾಗಿ ಬಿಡುತ್ತದಲ್ಲದೆ ಶುಂಠಿಯನ್ನು ಕೀಳಲೂ ಸುಲಭವಾಗುತ್ತದೆ. ಮಲಬಾರದಲ್ಲಿ ಅರಿಸಿನದ ಕೊಂಬುಗಳನ್ನು ನೆಟ್ಟು ಅವುಗಳ ಮೇಲೆ (೨/೩) ಉಮಿಯ ತರ ಹಾಕುತ್ತಾರೆ. ಇದರಿಂದ ಆರ್ದ್ರತೆಯುಳಿಯುತ್ತದೆ. ಹವಾಮಾನದಲ್ಲಿ ವಿಪರೀತ ಬದಲಾವಣೆಯಾದರೂ ಅರಿಸಿನಕ್ಕೆ ಬಾಧೆ ತಟ್ಟುವದಿಲ್ಲ; ಅದಕ್ಕೆ ರೋಗ ಬರದಂತೆಯೂ ನೋಡಿಕೊಳ್ಳುತ್ತದೆ; ಮೊಳಕೆಗೆ ಉಸಿರು ಸಿಗುವಂತಾಗುತ್ತದೆ. ಇದರಿಂದ ಅದು ಫಲವತ್ತಾಗುವದು. ಹಣ್ಣಿನ ಗಿಡಗಳ ಸುತ್ತಲೂ ಉಮಿಯ ತರ ಹಾಸುವುದರಿಂದ ಬೇಸಿಗೆಯಲ್ಲಿ ಆರ್ದ್ರತೆಯುಳಿದು ಗಿಡಗಳಿಗೆ ಹಿತವಾಗುತ್ತದೆ.

ಉಮಿಯನ್ನು ಗೊಬ್ಬರಕ್ಕೂ ಉಪಯೋಗಿಸುತ್ತಾರೆ. ಬಹಳ ಜಿಗುಟಾದ ಮಣ್ಣಿನಲ್ಲಿ ಉಮಿಯನ್ನು ಸೇರಿಸುವದರಿಂದ ಅದರ ಜಿಗುಟು ಕಡಿಮೆಯಾಗುತ್ತದೆ. ಉಮಿಯ ಬೂದಿಯಲ್ಲಿ ಸಸ್ಯಕ್ಷಾರ ಮುಂತಾದ ಉಪಯುಕ್ತ ಅಂಶಗಳಿರುವದರಿಂದ ಅದರ ಗೊಬ್ಬರ ಚೆನ್ನಾಗಿ ಆಗುತ್ತದೆ. [ Eastern Economist ದಿಂದ ಆಯ್ದುದು. ]

— ವಿ. ಜಿ. ಭಟ್ಟ

---

ಬಿಕ ಜೀವನಗಳಿಗೆ ಅವಶ್ಯವಾದ ಭಿನ್ನ ವಿದ್ಯೆ, ಕೈಗಾರಿಕೆಗಳನ್ನು ಕಲಿಸುವುದು ನ್ಯಾಯ್ಯವಾನಿಕವಿದೆ. ಇಷ್ಟಾದ ಹೊರತು ಮುಂದಿನ ಪೀಳಿಗೆ ಸುಧಾರಿಸುವುದು ಅಸಾಧ್ಯವೇ ಸರಿ ಎಂಬುದನ್ನು ನಾಳಿನ ನಾಡನ್ನು ಕಟ್ಟುವ ಗುರುತರ ವಾದ ಹೊಣೆ ಹೊತ್ತ ಮಾತಾಪಿತೃಗಳು ಗಮನಿಸಬೇಕು.

—ವಿದ್ಯಾವಿಲಾಸಿ

## ಒಬ್ಬನ ಅಮೃತ ಇನ್ನೊಬ್ಬನಿಗೆ ವಿಷ

ಎಲ್ಲ ಇಂದ್ರಿಯಗಳಲ್ಲಿ ರಸನೇಂದ್ರಿಯು ಬಹಳ ಜಟಿಲವಾದುದು, ಸೂಕ್ಷ್ಮವಾದುದು. ನಾವು ಯಾವುದನ್ನಾದರೂ ತಿಂದು ಇದು ರುಚಿಯಾಗಿದೆ ಎಂದರೆ ಆಗ ಆ ಅನುಭವದಲ್ಲಿ ಕೇವಲ ರುಚಿಯಲ್ಲದೆ ಇನ್ನೂ ಹಲವಾರು ಅನುಭವಗಳು ಸೇರಿರುತ್ತವೆ ಎಂದು ಜಾರ್ಜ್ ವ್ಯಾನ್ ಎಂಬ ರಸಜ್ಞರು ಬರೆಯುತ್ತಾರೆ.

ನಾವು ಮೂಗಿನಿಂದ ರುಚಿ ನೋಡುತ್ತೇವೆ, ಮುಟ್ಟಿ ನರಗಳ ತುದಿಯಿಂದ ರುಚಿ ನೋಡುತ್ತೇವೆ, ಸ್ಮರಣ ಶಕ್ತಿಯಿಂದ ಕೂಡ ಒಮ್ಮೊಮ್ಮೆ ರುಚಿ ನೋಡುತ್ತೇವೆ, ಎಂದರೆ ಯಾರೂ ಆಶ್ಚರ್ಯಪಡಬೇಕಾಗಿಲ್ಲ. ಒಲೆಯ ಮೇಲಿನ ಕಾಫಿ ನಮಗೆ ಹಿತಕರ, ಬೇಕು ಎನಿಸುತ್ತದೆ. ಹಪ್ಪಳ ಸಂಡಿಗೆ ಕರುಂಕುರುಂ ಎನ್ನುವಂತೆ ಗರಿ ಗರಿಯಾಗಿದ್ದರೆ ನಮಗೆ ಒಳ್ಳೆಯದೆನಿಸುತ್ತದೆ. ಬೇಸಿಗೆಯಲ್ಲಿ ತಣ್ಣನೆಯ ಪಾನಕ ಯೋಗ್ಯವೆನಿಸುತ್ತದೆ; ಊಟದ ಸ್ಥಳ ಸ್ವಚ್ಛವಿದ್ದರೆ ಅದೂ ಪ್ರಶಸ್ತವೆನಿಸುತ್ತದೆ. ಹೀಗೆ ರುಚಿ ಭೇದವು ಇತರ ನಾನಾ ಪ್ರಕಾರದ ಅನುಭವಗಳ ಪ್ರಭಾವಕ್ಕೊಳಗಾಗುವುದರಿಂದ ಒಂದನ್ನು ಇನ್ನೊಂದನ್ನಾಗಿ ಎಷ್ಟೋ ಸಲ ತಿಳಿದುಕೊಳ್ಳುತ್ತೇವೆ; ನಿಜವಾದ ರುಚಿಯನ್ನು ತಿಳಿಯಲು ವಿಶೇಷ ಪರಿಶ್ರಮವೇ ಬೇಕಾಗುತ್ತದೆ.

ಈ ರುಚಿ ಜ್ಞಾನ ಇಡಿ ನಾಲಿಗೆಗೆ ಇರುವುದೆಂದು ತಿಳಿದುಕೊಳ್ಳುವುದು ತಪ್ಪು. ನಾಲಿಗೆಯನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರೆ ಅದರಲ್ಲಿ ಚಿಕ್ಕ ಚಿಕ್ಕ ಕುಳಿಗಳು ಕಂಡು ಬರುತ್ತದೆ. ಅವುಗಳಲ್ಲಿ ರಸನಾಶಕ್ತಿ ಅಡಗಿದೆ. ಬಾಯಲ್ಲಿ ಹಾಕಿದ ಆಹಾರ ಕರಗಿದ ಹೊರತು ರಸನೇಂದ್ರಿಯ ಅದರ ರುಚಿಯನ್ನು ಅನುಭವಿಸಿ ಹೇಳಲಾರದು. ಕ್ವಿನೀನಿನ ಗಟ್ಟಿಯಾದ ಹರಳನ್ನು ಬಾಯಿಗೆ ಹಾಕಿಕೊಂಡರೆ ಆಗುವುದಕ್ಕಿಂತ ಅದನ್ನು ನೀರಲ್ಲಿ ಎಳ ಚೆರಕೆ ಮಾಡಿ ಕುಡಿದರೆ ಹೆಚ್ಚು ಕಹಿಯೆನಿಸುವುದು ಇದಕ್ಕೆ ನಿದರ್ಶನ.

ಷಡ್ರಸಗಳಿಗೆ ಮೂಲ ನಾಲ್ಕೇ ರುಚಿ ಪ್ರಕಾರಗಳು : ಸಿಹಿ, ಉಪ್ಪು, ಕಹಿ ಮತ್ತು ಹುಳಿ. ಈ ನಾಲ್ಕರ ವಿವಿಧ ಮಿಶ್ರಣದಿಂದ ನಮಗೆ ಬಾಯಿ ನೀರು ಬರಿಸುವ ನೂರಾರು ರುಚಿಯ ಆಹಾರ ವಸ್ತುಗಳನ್ನು ತಯಾರಿಸುತ್ತಾರೆ. ರುಚಿಗ್ರಾಹಕ ಕುಳಿಗಳು ಅಥವಾ ‘Taste Buds– ಸವಿ ಮುಗುಳುಗಳಲ್ಲಿ’ ಒಂದೊಂದು ವರ್ಗದವು ಒಂದೊಂದು ಬಗೆಯ ರುಚಿಯನ್ನು ಗುರುತಿಸಬಲ್ಲವು. ನಾಲಿಗೆಯ ತುದಿಯಲ್ಲಿ ಮಾಧುರ್ಯಗ್ರಾಹಕ ಸವಿ ಮುಗುಳುಗಳಿವೆ. ನಾಲಿಗೆಯ ಬದಿಯಲ್ಲೂ ನಡು ಭಾಗದ ಹತ್ತಿರವೂ ಉಪ್ಪಿನ ರುಚಿ ಹಿಡಿಯುವ ಮುಗುಳುಗಳಿವೆ. ಇವುಗಳ ಹಿಂದೆ ಹುಳಿಯನ್ನು ಸವಿಯುವ ಮುಗುಳುಗಳಿವೆ. ನಾಲಿಗೆಯ ಮೂಲದಲ್ಲಿ ಕಹಿಯನ್ನು ಹೀರುವ ಮುಗುಳುಗಳಿವೆ.

ರಸಶಾಸ್ತ್ರದಲ್ಲಿ ರಸಜ್ಞರಿದ್ದಾರೆ. ಅವರು ವಿರುದ್ಧವಾದ ರಸದ್ರವ್ಯಗಳ ಮಿಶ್ರಣದಿಂದ ಹೀರುಚಿಯನ್ನು ಕಂಡಿದ್ದಾರೆ. ಸಹಜ ಗಳಲ್ಲಿ ಹೇಗೆ ಹೊಂದುವ ಮುಖ್ಯ ಹೊಂದುವ ರಸಗಳೆಂಬ ಭೇದವಿದೆಯೋ ಹಾಗೇ ಇಲ್ಲಿಯೂ. ಈ ಅಂಶವೇ ಪಾಕಶಾಸ್ತ್ರದಲ್ಲಿ ಬಹು ಮುಖ್ಯವಾದುದು. ಮಾಂಸ ಮಾರುವವರು ಈ ಅಂಶವನ್ನು ಬಲ್ಲರು. ಅದರಿಂದಲೇ ಅವರು ಉಪ್ಪು ಹೆಚ್ಚು ಹಾಕಿದ ಮಾಂಸಕ್ಕೆ ಆ ಉಪ್ಪಿನ ಅಂಶವನ್ನು ಕಡಿಮೆ ಮಾಡಲು ಸಕ್ಕರೆ ಬೆರೆಸುತ್ತಾರೆ.

ಶೀತಲ ವಸ್ತುಗಳನ್ನು ಬಹಳ ಕಾಲ ನಾಲಿಗೆಯಲ್ಲಿಟ್ಟರೆ ರುಚಿಶಕ್ತಿ ಕಡಿಮೆಯಾಗುವುದರ ಅರುಚಿ ಹುಟ್ಟುವುದು. ಸವಿ ಮುಗುಳುಗಳ ಶಕ್ತಿ ಕುಂದುವುದೇ ಅದಕ್ಕೆ ಕಾರಣ. ಕುಡಿತ ಮತ್ತು ಸೇದುಬತ್ತಿಯ ಸೇವನೆಯಿಂದಲೂ ರುಚಿ ಮಾಂದ್ಯ ಉಂಟಾಗುತ್ತದೆ.

ಸಾಮಾನ್ಯವಾಗಿ ಎಲ್ಲ ಪೇಯಗಳಲ್ಲೂ ಕಹಿಯ ಅಂಶವಿದೆ. ಆದರಿಂದಲೆ ಅವು ರುಚಿಕರವಾಗುತ್ತವೆ. ನೀರು ಮತ್ತು ಹಾಲುಗಳಲ್ಲಿ ಮಾತ್ರ ಕಹಿಯ ಅಂಶವಿಲ್ಲ. ಬ್ರುಸೀನ್ ಎಂಬ ರಾಸಾಯನಿಕ ದ್ರವ್ಯಕ್ಕಿಂತ ಕಹಿಯಾದ ಇನ್ನೊಂದು ವಸ್ತುವಿಲ್ಲ. ಅದು ಕ್ವಿನೀನಿಗಿಂತ ೧೨ ಪಟ್ಟು ಕಹಿ. ಎನ್‌ಪ್ರೋ ಪ್ರೋಕ್ಸಿ ಎಂಬುದು ಡಚ್ಚ ರಾಸಾಯನಿಕರು ತಯಾರಿಸಿದ ಅತ್ಯಂತ ಮಧುರವಾದ ದ್ರವ್ಯ, ಅದು ಕಬ್ಬಿನ ಸಕ್ಕರೆಗಿಂತ ೪ ಸಾವಿರ ಪಟ್ಟು ಸಿಹಿಯಿದೆ.

ಒಬ್ಬೊಬ್ಬರಿಗೆ ಒಂದೊಂದು ರಸದ್ರವ್ಯವನ್ನು ರುಚಿ ನೋಡುವ ಶಕ್ತಿ ಹೆಚ್ಚಾಗಿದ್ದು, ಉಳಿದ ಸವಿ ಮುಗುಳುಗಳು ದುರ್ಬಲವಿರುತ್ತವೆ. ಈ ಕಾರಣದಿಂದಲೇ ಒಬ್ಬರಿಗೆ ಒಂದು ತಿನಿಸು ಎಷ್ಟು ಅಂಶ ಸಿಹಿ ಅಥವಾ ಖಾರ ಎನಿಸುವುದೋ ಇನ್ನೊಬ್ಬರಿಗೆ ಅಷ್ಟೇ ಅಂಶ ಅರುಚಿ ಆಗದಿರಬಹುದು. ಇದೇ ಕಾರಣದಿಂದ ‘ ಲೋಕೋ ಭಿನ್ನರುಚಿಃ ’ ಎಂಬ ಗಾದೆ ಹುಟ್ಟಿತು. ಕೆಲವೊಂದು ಪದಾರ್ಥಗಳನ್ನು ಸವಿದಲ್ಲಿ ಒಬ್ಬರಿಗೆ ಸಿಹಿಯಾಗಿ ತೋರಿ ಮತ್ತೊಬ್ಬರಿಗೆ ಕಹಿಯಾಗಿ ಕಂಡ ಉದಾಹರಣೆಗಳನ್ನು ರುಚಿಕೋವಿದರು ಬಲ್ಲರು. ಅದರಿಂದ ‘ One mans's meat is another man's poison ಒಬ್ಬನಿಗೆ ಅಮೃತವೆನಿಸಿದ್ದು ಇನ್ನೊಬ್ಬನಿಗೆ ವಿಷ ’ ಎಂಬ ಮಾತು ಹುಟ್ಟಿಕೊಂಡಿತು.

ಚಿಕ್ಕ ಮಕ್ಕಳು ‘ರುಚಿ ನೋಡುವುದು ನಾಲಿಗೆಯ ಮಧ್ಯಭಾಗದಿಂದ. ದೊಡ್ಡವರ ನಡು ನಾಲಿಗೆಯಲ್ಲಿ ರುಚಿಶಕ್ತಿಯೇ ಇಲ್ಲ. ಶೀತಪಲಯದ ಸಮುದ್ರದಲ್ಲಿಯ ತಿಮಿಂಗಿಲ ಮತ್ತು ಮಂಗಗಳಲ್ಲಿ ರುಚಿಶಕ್ತಿ ಕಡಿಮೆ. ಕೆಲವು ಮೀನುಗಳಿಗೆ ಇಡಿ ದೇಹದ ತುಂಬ ರುಚಿ ಗ್ರಂಥಿಗಳಿವೆ. ಹಸುವಿನ ನಾಲಿಗೆಯಲ್ಲಿ ಮನುಷ್ಯನ ನಾಲಿಗೆಯಲ್ಲಿರುವುದಕ್ಕಿಂತ ೫ ಪಟ್ಟು ಹೆಚ್ಚು ಸವಿಮುಗುಳುಗಳಿವೆ— ಅಂದರೆ ಸುಮಾರು ೧೨ ರಿಂದ ೩೦ ಸಾವಿರದ ವರೆಗೆ. ಅದರಿಂದ ಅದು ಮನುಷ್ಯನಿಗಿಂತ ಸೂಕ್ಷ್ಮ ರುಚಿಭೇದವನ್ನು ತಿಳಿಯಬಲ್ಲುದಂತೆ!’

– ರಸಜ್ಞ

Reg. No. B. 3148

LICENCE No. 3
Licenced to Post without Prepayment

KARMAVEER 25-10-48

# ಪುಸ್ತಕ ಪರಿಚಯ



## ಜರಾಸಂಧಿ (ಸಾಮಾಜಿಕ ನಾಟಕ)

ಲೇಖಕರು, ಶ್ರೀರಂಗ. ಪ್ರಕಾಶಕರು, ಕರ್ನಾಟಕ ಸಂಘ ಸಂಘುಗಿರಿ ಸದನ, ಮುಂಬಯಿ ೪. ಪುಟಗಳು ೬೯ ಬೆಲೆ ೧॥ ರೂ.

ಇದೊಂದು ಶ್ರೀರಂಗರ ಸ್ವತಂತ್ರ ಸಾಮಾಜಿಕ ನಾಟಕ. ಕನ್ನಡದಲ್ಲಿ ಸಾಮಾಜಿಕ ನಾಟಕಗಳು ವಿರಳವೆನಿಸಿದಾಗ ಶ್ರೀರಂಗರ ಲೇಖನಿಯಿಂದ ಆ ಕೊರತೆ ಹಿಂಗಿದೆ. ಹಿಂದಿನಿಂದ ಇಂದಿನ ವರೆಗೆ ಅವರ ಲೇಖನಿಯು ಅವ್ಯಾಹತವಾಗಿ ಸಾಗಿಬಂದಿದೆ. ಪ್ರಸ್ತುತ ಸಾಮಾಜಿಕ ನಾಟಕವು ಉಳಿದವುಗಳಿಗಿಂತಲೂ ಬೇರೊಂದು ಮಾರ್ಗವನ್ನು ತುಳಿದಿದೆ. ಮಿಸ್ ಮಂದಾ ಅಥವಾ ಮಂದಾಕಿನಿ ಪಿತೃದ ಪಾಂಡಪ್ಪನವರ ಮೊಮ್ಮಗಳು ವಕೀಲನಾದ ಶ್ರೀಯುತ ಸುಬ್ಬಣ್ಣನೊಂದಿಗೆ ದಾಸ್ಯಸೇವೆಯಲ್ಲಿ ನಿರತಳಾಗಿರುವಳು. ಅವಳ ತಂದೆಯಾದ ಬರೆಯುವ ಬಿಂದೂರಾಯರು ಅವಳು ತುಳಿಯುವ ಮಾರ್ಗವನ್ನು ಕುರಿತು ಅವಳೊಡನೆ ಮಾತನಾಡುತ್ತಲೇ ಇರುವದಿಲ್ಲ. ಬಿಂದೂರಾಯರ ಸ್ವಭಾವ ವಿಕ್ಷಿಪ್ತವಾದುದು. ಮಾತನಾಡುವಾಗ ಯಾರನ್ನಾದರೂ ಉದ್ದೇಶಿಸಿ ಮಾತನಾಡುವನೋ, ಸ್ವಯಂ ಮಾತನಾಡಿಕೊಳ್ಳುತ್ತಿರುವನೋ ಎಂಬುದನ್ನು ಹೇಳಲು ಬಾರದಂತೆ ಅವನ ಮಾತಿನ ವೈಖರಿ ಸಾಗಿರುತ್ತದೆ. ಮಂದಾಕಿನಿಯ ಅಜ್ಜ ಪಿತೃದ ಪಾಂಡಪ್ಪನವರು ಒಂದು ವರ್ಷದ ದೇಶಸಂಚಾರವನ್ನು ಮುಗಿಸಿ ಬರುವಷ್ಟರಲ್ಲಿ ಮೊಮ್ಮಗಳು ಅಜ್ಜನಿಗಾಗಿ ಹೊಸ ಮನೆಯೊಂದನ್ನು ಸಿದ್ಧಪಡಿಸಿರುವಳು. ಆಗಲೇ ಪಾಂಡಪ್ಪನವರಿಗೂ ಸುಬ್ಬಣ್ಣನಿಗೂ ಪರಿಚಯವುಂಟಾದುದು. ಪಾಂಡಪ್ಪನವರಿಗೆ ಸುಬ್ಬಣ್ಣನೊಡನೆ ಮಂದಾಕಿನಿಯು ತಿರುಗುವದು ಸರಿಯೆನಿಸುವದಿಲ್ಲ. ಸುಬ್ಬಣ್ಣ ಎಂತಹನೋ ಎಂದೂ ಸಂದೇಹಗೊಂಡಿರುವರು. ಶ್ರೀಯುತ ಸುಬ್ಬಣ್ಣ ಮತ್ತು ಮಂದಾಕಿನಿಯವರಲ್ಲಿ ಸ್ತ್ರೀ—ಪುರುಷರ ಸ್ಥಾನಮಾನಗಳ ಬಗ್ಗೆ ವಾದವಾಗಿ ಮಂದಾಕಿನಿಯು ಸುಬ್ಬಣ್ಣನ ಅಭಿಪ್ರಾಯವನ್ನು ಒಪ್ಪದೆ ಅವನ ಪ್ರೇಮಭಿಕ್ಷೆಯನ್ನು ನಿರಾಕರಿಸುವಳು. ಶ್ರೀಯುತ ಸುಬ್ಬಣ್ಣ ನಿರಾಶನಾಗಿ ಆ ಊರು ಬಿಡಬೇಕೆನ್ನುವಷ್ಟರಲ್ಲಿ ಮಂದಾಕಿನಿಯ ಅಜ್ಜ ಪಾಂಡಪ್ಪನವರು ಅವನನ್ನು ಕರೆಯಿಸುವರು. ಅವರೊಡನೆ ಮಾತುಕತೆ ಸಾಗಿರುವಾಗಲೇ ಮಂದಾಕಿನಿಯೂ ಬರುವಳು ಆಗ ಅವರೀರ್ವರಲ್ಲಿ ಸ್ತ್ರೀ—ಪುರುಷರ ಸ್ಥಾನಮಾನಗಳ ಬಗ್ಗೆ ಭಿನ್ನಾಭಿಪ್ರಾಯವಿದ್ದರೂ ಮುದುಕನ ಸಂಧಿಯಿಂದಾಗಿ ಒಂದುಗೂಡುವರೆಂಬುದೇ ಜರಾಸಂಧಿ ನಾಟಕದಲ್ಲಿ ವಸ್ತು.

ಮಿಸ್ ಮಂದಾ ಅಥವಾ ಮಂದಾಕಿನಿ ಈ ನಾಟಕದ ನಾಯಿಕೆ. ಸುಶಿಕ್ಷಿತ ಸ್ತ್ರೀಸಮಾಜದ ಅಭಿಪ್ರಾಯವನ್ನು ಅವಳು ವ್ಯಕ್ತಗೊಳಿಸಿದ್ದಾಳೆ. ಸ್ತ್ರೀಯರ ಸ್ಥಾನ–ಮಾನಗಳ ಬಗ್ಗೆ ಹೋರಾಟ ಹೂಡಿದ ಸಮಯವಿದು. ಅವರಿಗೆ ಸಂಪೂರ್ಣ ಯಶ ದೊರಕಿದೆಯೆಂಬೂದೂ ಅನೇಕರಿಗೆ ಗೊತ್ತಿದ್ದ ಮಾತು. ಮಂದಾಕಿನಿ ಇವರೆಲ್ಲರಿಗಿಂತಲೂ ಒಂದು ಹೆಜ್ಜೆ ಮುಂದೆ ಹೋಗಿ ಸ್ತ್ರೀಯ ಸ್ಥಾನವು ಪುರುಷನಿಗಿಂತಲೂ ಹೆಚ್ಚಿನದೆಂದು ಪ್ರತಿಪಾದಿಸುತ್ತಾಳೆ. ಶ್ರೀಯುತ ಸುಬ್ಬಣ್ಣ ಇದನ್ನೊಪ್ಪುವದಿಲ್ಲ. ಸ್ತ್ರೀಯರು ಮದುವೆಯಾಗದಿರುವದು ಸಮಾಜಘಾತಕವೆಂದು ಅವನ ಪ್ರತಿಪಾದನೆ ಕಾಯ್ದುನವೇ ಸ್ತ್ರೀಯ ಜನ್ಮಸಿದ್ಧ ಹಕ್ಕೆಂದು ಭಾವಿಸಿದ್ದಾನೆ. ಇದೆಲ್ಲ ಹಳೆಯ ಮಾರ್ಗವೆಂದು ಮಂದಾಕಿನಿಯ ಹಟವಾದ. ಸುಬ್ಬಣ್ಣ ಹಳೆಯಮಾರ್ಗದ ಪುನರುದ್ಧಾರವಾಗಬೇಕೆಂದು ಹೇಳುತ್ತಾನೆ. ಮಂದಾಕಿನಿಯ ಅಜ್ಜ ಪಿತೃದ ಪಾಂಡಪ್ಪನವರು ಅನುಭವದ ಹಿರಿಯತನದಲ್ಲಿ ಹಳೆಯದು ಹೋಗಬೇಕು ಆದರೆ ಅದು ಪೂರ್ಣವಾಗಿ ಹೋಗದು. ಮತ್ತೆ ಮತ್ತೆ ತಿರುಗಿಬರುವದು. ಅದರ ಕ್ರಮದಲ್ಲಿಯೊಂದೇ ಬದಲಾವಣೆಯಾಗುವದು ಎಂದು ಅವರಲ್ಲಿಯ ಸಮಸ್ಯೆಗೆ ಪರಿಹಾರೋಪಾಯವನ್ನು ಸೂಚಿಸಿದ್ದಾರೆ. ಅಡಿಗೆಯ ಅನಂತ, ಆಳು ಚೆನ್ನ ವಸ್ತುನಿರೂಪಣೆಗೆ ಪೋಷಣೆಯೀಯುವ ಪಾತ್ರಗಳು. ಬರೆಯುವ ಬಿಂದೂರಾಯರ ಪಾತ್ರನಾದರೂ ಇದೇ ಬಗೆಯದೆಂದು ಹೇಳಬಹುದು.

ಶ್ರೀರಂಗರದು ಸರಳ ಸುಂದರ ಶೈಲಿ. ಅಲ್ಲಲ್ಲಿ ಮಿದುವಾದ ಹಾಸ್ಯ ನುಸುಳಿ ಬಂದು ಮಾತಿನ ವೈಖರಿಗೆ ಹೊಸದೊಂದು ಮೆರುಗನ್ನು ಕೊಡುತ್ತದೆ. ಆದರೆ ಉಕ್ಕುಕ್ಕಿ ಹೊರಸೂಸುವ ಹಾಸ್ಯವಿಲ್ಲಿ ಇಲ್ಲ. ಹಾಸ್ಯದಲ್ಲಿ ಸಮಾಜದ ದೋಷಗಳು ಒಮ್ಮೊಮ್ಮೆ ಸ್ಫುಟವಾಗಿ ಮೂಡಿಕೊಳ್ಳುವವು ಹಾಗು ಈ ಮೂಲಕ ವಿಚಾರಶೀಲರನ್ನು ತಲೆಕೆರೆಯ ಹಚ್ಚುವ ಶಕ್ತಿಯು ಈ ಬಗೆಯ ಹಾಸ್ಯದಲ್ಲಿರುವದೆಂಬುದನ್ನು ಮರೆಯಲಾಗದು. ಶ್ರೀರಂಗರು ಹೊಸ ಹೊಸ ನಾಟಕಗಳನ್ನು ರಚಿಸಿ ಸಮಾಜದ ಲೋಪದೋಷಗಳನ್ನು ತಿದ್ದಿ ವಾಚಕರನ್ನು, ಪ್ರೇಕ್ಷಕರನ್ನು ರಂಜಿಸಲೆಂದು ಹಾರೈಸೋಣ.

## ಉದ್ಧಾರ

ಬರೆದವರು ಶ್ರೀ ಬಿ. ಭುಜಂಗರಾವ್ ಬಿ. ಎ., ವಿದ್ವಾನ್ ಪ್ರಕಾಶಕರು ಹಿಂದ್ ಕಿತಾಬ್ಸ್ ಲಿಮಿಟೆಡ ೧೫೪/೧ ಐದನೆಯ ಕ್ರಾಸ್, ನಾಲ್ಕನೆಯ ಮೆಯಿನ್ ರಸ್ತೆ, ಚಾಮರಾಜಪೇಟೆ, ಬೆಂಗಳೂರು ಸಿಟಿ. ಪುಟ ೧೪೪ ಬೆಲೆ ೧೨ ಆಣೆ.

ಇದು ರಾಜ್ಯಗಳ ವ್ಯವಹಾರಗಳಲ್ಲಿ ನಡೆದ ಘಟನೆಯ ನಾಟಕವು. ರಾಜರು ಲೋಭ ಮೋಹಗಳಿಗೆ ಒಳಗಾಗಿ ಕರ್ತವ್ಯಾಂಧರಾಗಿ ಪಾಪದಲ್ಲಿ ಬಿದ್ದು ನರಳಾಡದೆ, ಪ್ರಜಾಸೇವೆಯೇ ತಮ್ಮ ಧ್ಯೇಯವಾಗಿಟ್ಟುಕೊಂಡು ಕರ್ತವ್ಯದಕ್ಷರಾಗಿ, ನ್ಯಾಯ, ನೀತಿ, ಸತ್ಯ, ಧರ್ಮದಿಂದ ನಡೆದು ತಮ್ಮ ದೇಶವನ್ನು. ತಮ್ಮ ಜನ್ಮಭೂಮಿಯನ್ನು ಉದ್ಧಾರಮಾಡಿ ಶಾಶ್ವತ ಕೀರ್ತಿ ಪಡೆಯಲು ಬೋಧಿಸುತ್ತದೆ. ಈ ನಾಟಕವು ಮಾನವನಿಗೂ ಐಶ್ವರ್ಯ ಇರುವಾಗ್ಗೆ ಸ್ವಾರ್ಥಪರನಾಗದೆ, ಸದುಪಯೋಗವಾಗುವಂತೆ ಜನಸೇವೆ ಮಾಡಿ, ಸತ್ಯ, ನ್ಯಾಯ ನೀತಿ, ಧರ್ಮದಿಂದ ನಡೆದು ಪುಣ್ಯಗಳಿಸಿ, ತನ್ನ ಜನ್ಮವನ್ನು ಉದ್ಧರಿಸಿಕೊಳ್ಳಲು ಮಾರ್ಗ ತೋರಿಸಿಕೊಡುತ್ತಿದೆ.

ಈ ಜಗತ್ತಿನಲ್ಲಿ ಸ್ತ್ರೀಯರಿಗೆ ಪತಿಸೇವೆಗಿಂತ ಬೇರೆ ಯಾವುದೂ ಉತ್ತಮವಸ್ತುವಿಲ್ಲೆಂದೂ ಮತ್ತು ಅದರಿಂದಲೇ ಅವರಿಗೆ ಮೋಕ್ಷ ಎಂಬುವನ್ನೂ ಸಿದ್ಧಮಾಡಿಕೊಡುತ್ತದೆ. ಅವಳ ಪತಿಯು ಎಷ್ಟು ದುಷ್ಟಮಾರ್ಗಕ್ಕೆ ಬಿದ್ದಿದ್ದರೂ ತನ್ನ ಅನನ್ಯವಾದ ಸೇವೆಯಿಂದ ಅವನನ್ನು ಸನ್ಮಾರ್ಗಕ್ಕೆ ತರಬಲ್ಲಳೆಂಬುದನ್ನು ತಿಳಿಸುತ್ತದೆ. ಇಂದಿನ ಕಾಲದಲ್ಲಿ ಪತಿ ಭಕ್ತಿ ಪತಿದಾಸ್ಯವಾಗಿದೆ. ಇಲ್ಲವೆ ಕೆಲವು ಪಟ್ಟಣಿಗರಲ್ಲಿ ಪತಿಯನ್ನು Slave-driver–ಗುಲಾಮರ ಒಡೆಯ ಎಂಬ ತಿರಸ್ಕಾರಭಾವದಿಂದ ನೋಡುವ ಪ್ರವೃತ್ತಿ ಹುಟ್ಟಿದೆ. ಇದು ಕೇವಲ ಅನಾಗರಿಕ. ಪತಿಯ ಅನಾಗರಿಕತೆಗಿಂತ ಇದು ಹೆಚ್ಚಿನ ಅನಾಗರಿಕತೆ.

## ಬೃಂದಾವನ

ಬರೆದವರು ಶ್ರೀ ವ್ಹಿ. ಶೀ. ಅನಂತ ಪದ್ಮನಾಭರಾವ್ ಪ್ರಕಾಶಕರು ಶ್ರೀ ಕಾವೇರಿ ಪ್ರಕಟನಾಲಯ, ಮಡಿಕೇರಿ ಪುಟ ೫೮, ಬೆಲೆ ೧೨ ಆಣೆ.

'ಬೃಂದಾವನ' ಒಂದು ಕವನ ಸಂಗ್ರಹ. ಇದರಲ್ಲಿ ೫೮ ಚಿಕ್ಕ ಚಿಕ್ಕ ಕವನಗಳಿವೆ. ಕವನಗಳು ಚಿಕ್ಕವಿರುವಂತೆ ಚೊಕ್ಕವೂ ಇವೆ; ಸದ್ಭಾವನೆಗಳನ್ನು ಪಡಿಮೂಡಿಸುತ್ತಿವೆ; ಸರಳವಾಗಿವೆ. ಆದರೆ ಕಾವ್ಯದ ಊರ್ಜಸ್ವಿಯಾದ ತೇಜಸ್ಸು ಎಲ್ಲಿಯೂ ಕಾಣಿಸದು, ರಸಪಾಕ ಹದವಾಗಿರುವದು ಕಡಿಮೆ. ಆದರೂ ಭಾವಹದವಾಗಿರುವದು... ಭರವಾದ ಈ ಕವನ ಸಂಗ್ರಹ ಒಟ್ಟಿನ ಮೇಲೆ ಯೋಗ್ಯವಿದೆಎನ್ನಬಹುದು.

## ಸೇವಾ (ವಾರ್ಷಿಕ ಸಂಚಿಕೆ)

ಕರ್ನಾಟಕ ಸೇವಾಸಂಘ ಮದ್ರಾಸ
ಪುಟಗಳು ೧೨೪ ಬೆಲೆ ೨ ರೂಪಾಯಿ.

ಸೇವಾ ಎಂಬ ಹೆಸರಿನ ಕೈಬರಹದ ತ್ರೈಮಾಸಿಕ ಪತ್ರಿಕೆಯ ವಾರ್ಷಿಕ ಸಂಚಿಕೆಯು ಒಳ್ಳೇ ಸೊಗಸಾಗಿ ಮುದ್ರಿತವಾಗಿ ಪ್ರಕಟವಾಗಿದೆ. ಇದರಲ್ಲಿ ೪ ಕತೆಗಳು, ೬ ಕವನಗಳು ಇದ್ದು ಸಂಚಿಕೆಯ ಬಹುಭಾಗವು ವಿಚಾರಾತ್ಮಕ, ವಿಮರ್ಶಾತ್ಮಕ ಚಾರಿತ್ರಿಕ ಮತ್ತು ಸಂಶೋಧನಾತ್ಮಕ ಲೇಖನಗಳಿಂದ ತುಂಬಿದೆ. ಈ ಬರೆಹಗಳು ಬಹುಮಟ್ಟಿಗೆ ವಿದ್ವತ್ಪೂರ್ಣವಾಗಿವೆ. ಕನ್ನಡ ಸಾಹಿತ್ಯದಲ್ಲಿ ಚನ್ನಾಗಿ ದುಡಿದ ವಿದ್ವಾಂಸರೇ ಲೇಖಗಳನ್ನು ಒದಗಿಸಿದ್ದಾರೆ. ಕೆಲ ಚಿತ್ರಗಳನ್ನೂ ಹಾಕಿದ್ದರಿಂದ ಸಂಚಿಕೆ ಆಕರ್ಷಕವೂ ಆಗಿವೆ. ಮದ್ರಾಸದ ಕರ್ನಾಟಕ ಸೇವಾ ಸಂಘದವರ ಉದ್ಯಮಶೀಲತೆಗೆ ಈ ವಾರ್ಷಿಕ ಸಂಚಿಕೆಯೊಂದು ಸಾಕ್ಷಿ.

## ವಿಧಿಯ ಲೀಲೆ

( ೨ ನೇ ಪುಟದಿಂದ ಮುಂದರಿದುದು )

ಅತ್ತನು. ಕಡೆಗೆ ನಾಲ್ಕಾರು ದಿನಗಳ ನಂತರ ತಿರುಗಿ ಭೂಮಿಯನ್ನೆಲ್ಲಾ ಗೇಣಿಗೆ ಕೊಟ್ಟು ದಯಾನನ್ನು ಬಲವಂತದಿಂದ ಮುಂಬಯಿಗೆ ಕರೆದೊಯ್ದು ರಘು ದಾರಿಯಲ್ಲಿ ತನಗೊದಗಿದ ಕಷ್ಟ ಅದೃಷ್ಟದ ಬದಲಾವಣೆ ಎಲ್ಲವನ್ನೂ ವಿವರಿಸಿ ಹೇಳಿದ ರಘು. ದಯಾನು ಮನೆಯಲ್ಲಿ ತಾಯಿ ತಂದೆಗಳ ದುರವಸ್ಥೆ ಎಲ್ಲವನ್ನೂ ಹೇಳಿದ. ಇಬ್ಬರೂ ಒಬ್ಬರನ್ನೊಬ್ಬರು ಬಂಧುಪ್ರೇಮದಿಂದ ನೋಡಿ ಸಂತೋಷದ ಕಣ್ಣೀರು ಹಾಕಿದರು.

ಮುಂಬಯಿಯಲ್ಲಿ ದಯಾನಿಗೆ ಪ್ರಿಂಟಿಂಗ ಪ್ರೆಸ್ಸಿನಲ್ಲಿ ೨೦೦ ರೂಪಾಯಿಯ ಕೆಲಸವು ದೊರೆಯಿತು. ಅಣ್ಣತಮ್ಮಂದಿರು ಇಬ್ಬರೂ ರಘುವಿನ ಬಂಗಲೆಯಲ್ಲಿಯೇ ಇದ್ದರು. ಕೆಲ ಕಾಲ ನಂತರ ದಯಾನಿಗೆ ಒಬ್ಬ ಅಂಗಡಿ ಯಜಮಾನರ ಕನ್ಯೆಯೊಡನೆ ವಿವಾಹವಾಯಿತು. ಸಂತೋಷದ ಸುಗ್ಗಿಯಾಯಿತು. ರಘುವಿನ 'ಲಕ್ಷ್ಮೀನಿವಾಸ' ಬಂಗಲೆ ತಲೆ ಎತ್ತಿನಿಂತಿದೆ. ರಘುವು "ಎಲ್ಲವೂ ವಿಧಿಯ ಲೀಲೆ ವಿಧಿಯ ಕೈವಾಡವನ್ನು ಅರಿತವರಾರು" ಎಂದುಕೊಂಡನು. ಎದುರಿಗಿದ್ದ ಸಮುದ್ರವು ಗಂಭೀರವಾಗಿ ಅರ್ಭಟಿಸುತ್ತಿತ್ತು. ರೇಡಿಯೋದಿಂದ ಹಾಡು ಕೇಳಿಬರುತ್ತಿತ್ತು. "ಜಗವೇ ಮಾಯಾ ಮಾಯಾ. . ."





ಈ ಪತ್ರಿಕೆಯನ್ನು ಹುಬ್ಬಳ್ಳಿ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ "ಲೋಕಶಿಕ್ಷಣ ಟ್ರಸ್ಟಿನ" ಪರವಾಗಿ ಹ. ರಾ. ಪುರೋಹಿತರೂ? ನೊಹರೆಯವರು ಮುದ್ರಿಸಿ ಪ್ರಕಟಿಸಿದರು.